ಸಚಿತ್ರ

ಪ್ರಪಂಚಧರ್ಮ—ಮೊದಲನೆಯ ಭಾಗ

# ದಾಕ್ಷಾಯಿಣಿ



“ ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ ”

—ನಾರಾಯಣ.

## ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ.

**ಶ್ರೀ ರಾಮಕೃಷ್ಣ ಪರಮಹಂಸರ ಕಥೆಗಳು.**

| | |
|---|---|
| ಮೊದಲನೆಯ ಭಾಗ | ೦-೧೦-೦ |
| ಎರಡನೆಯ ಭಾಗ | ೦- ೪-೦ |
| ಮೂರನೆಯ ಭಾಗ | ೦- ೪-೦ |
| ನಾಲ್ಕನೆಯ ಭಾಗ | ೦-೧೦-೦ |

**ಕವಿತಾಕುಸುಮ ಮಂಜರಿ.**

ಖಂಡ ಕಾವ್ಯ

| | |
|---|---|
| ಮೊದಲನೆಯ ಭಾಗ | ೦- ೫-೦ |
| ಎರಡನೆಯ ಭಾಗ | ೦- ೫-೦ |

**ಶ್ರೀ ಹರ್ಷನ ನಾಟಕಗಳು.**

೦- ೧೦-೦

ಪ್ರಿಯದರ್ಶಿಕೆ

ರತ್ನಾವಳಿ

ನಾಗಾನಂದಗಳ

ವಿಮರ್ಶಾತ್ಮಕ ಗ್ರಂಥ.

ವ್ಯವಸ್ಥಾಪಕ
**ಶ್ರೀ ಸರಸ್ವತೀ ಮಂದಿರಮ್**
ಧಾರವಾಡ.

(Sanctioned as a text, prize & library book)

ಕರ್ಣಾಟಕ ಹಿತೈಷಿಣೀ ಗ್ರಂಥಮಾಲೆಯ

ತೃತೀಯ ಪುಷ್ಪ.

ಸಚಿತ್ರ

ಪ್ರಪಂಚಧರ್ಮ--ಮೊದಲನೆಯ ಭಾಗ

# ದಾಕ್ಷಾಯಿಣಿ

ಇದನ್ನು

ಕರ್ಣಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರಾದ

**ಶ್ರೀ. ನಾರಾಯಣ ವೆಂಕಟೇಶ ಕುರಡಿ**

ಇವರು ರಚಿಸಿದರು.





ಮೂರನೆಯ ಮುದ್ರಣ.

ಬೆಲೆ ೮ ಆಣೆ



# ಪೀಠಿಕೆ





ಒಂದೊಂದು ಕಾಲದಲ್ಲಿ ಜಗತ್ತಿನಲ್ಲೆಲ್ಲಾ ತಾನು ತಾನೆಂದು ಮೆರೆದು ಪ್ರಪಂಚದ ಪ್ರಜೆಗಳಿಗೆಲ್ಲಾ ಆದರ್ಶವೆನಿಸಿಕೊಂಡ ಆರ್ಯಜನಾಂಗದ ಧರ್ಮ, ವಿದ್ಯೆ, ತೇಜಸ್ಸು ಇವೆಲ್ಲಾ ಇಂದು ಎಲ್ಲಿ ಹೋದುವು? ಹಿಂದೆ ಸರಸ್ವತೀತೀರದಲ್ಲಿ ವಾಸವಾಗಿದ್ದಾಗ ವೇದಪಠನದಿಂದ ಮನಶ್ಶಾಂತಿಯನ್ನೈದುತ್ತಿದ್ದ ಆರ್ಯಋಷಿಗಳ ವಂಶಜರೆನಿಸಿಕೊಂಡ ನಾವು ಇಂದು ಸ್ಕಾಟ್, ವರ್ಡ್ಸ್‌ವರ್ಥ, ಟೆನಿಸನ್ ಸಾಹೇಬರ ಕವಿತೆಗಳನ್ನು ಓದಿ ಸಮಾಧಾನ ತಾಳಬೇಕಾಗಿದೆ. ಪ್ರಾರಬ್ಧ! ಅಂದಿಗೆ ಅದೇ ಸುಖ, ಇಂದಿಗೆ ಇದೇ ಸುಖ. ಮುಂದೆ ಇನ್ನೂ ಎಂತಹ ಕಾಲ ಒದಗುವುದೋ ಯಾರು ಬಲ್ಲರು? ಸಾವಿರ ಮಾತಿನಿಂದೇನು? ಹಿಂದೂಗಳಾದ ನಮ್ಮ ಶಿಕ್ಷಣದ ದಿಶೆಯೇ ಬದಲಾಗಿಹೋಗಿದೆ. ನಮ್ಮ ನಿಜವಾದ ಸುಧಾರಣೆಯಾಗಬೇಕಾದರೆ ನಮ್ಮವರಿಗೆ ಧಾರ್ಮಿಕ ಶಿಕ್ಷಣವು ಬೇಕೇಬೇಕು. ಇತ್ತಿತ್ತಲಾಗಿ ವಿದ್ಯಾಖಾತೆಯ ಅಧಿಕಾರಿಗಳು ಪಾಠಶಾಲೆಗಳಲ್ಲಿ ನೈತಿಕಶಿಕ್ಷಣವನ್ನೂ ಕೊಡಬೇಕೆಂದು ಪ್ರಯತ್ನಪಡುತ್ತಿದ್ದಾರಂತೆ. ಧಾರ್ಮಿಕ ಶಿಕ್ಷಣ ಬೇರೆ, ನೈತಿಕ ಶಿಕ್ಷಣ ಬೇರೆ ಹೀಗಾದರೆ ಅದರಿಂದ ಆಗತಕ್ಕಷ್ಟು ಪ್ರಯೋಜನವು ಎಂದೂ ಆಗಲಾರದು. ನಮ್ಮವರ ನೀತಿಯ ಸುಧಾರಣೆಯಾಗಬೇಕಾದರೆ ನಾವು ನಮ್ಮ ಹಿರಿಯರು ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ತೀಡಬೇಕು.

ನಮ್ಮ ಪುರಾಣಗಳು ನೀತಿತತ್ವಗಳ ಆಗರಗಳು. ಪ್ರಜೆಗಳ ನೀತಿ ಸುಧಾರಣೆಯೇ ಅವುಗಳ ಉದ್ದೇಶ. ಆದರೆ ಕಾಲಮಹಿಮೆಯಿಂದ ನಮ್ಮ ಪುರಾಣಗಳು ಹಾಳುದೇಗುಲಗಳಂತಾಗಿವೆ. ಆದುದರಿಂದ ನಮ್ಮವರಿಗೆ ಅಲ್ಲಿ ಹೋಗಿ ದೇವತಾದರ್ಶನ ಪಡೆಯಲು ಮನಸ್ಸು ಮೆಚ್ಚದು. ಹೀಗೆ ಇಚ್ಛೆ ಇಲ್ಲದವರನ್ನು ಮನವೊಲಿಸಿ ಒಳಗೆ ಗರ್ಭಾಲಯದ ವರೆಗೆ ಕರೆದೊಯ್ದು ದೇವದರ್ಶನ ಮಾಡಿಸುವ ಪುಣ್ಯಾತ್ಮರಾದ ಪುರಾಣಿಕರೂ ತೀರ ವಿರಳರಾಗಿದ್ದಾರೆ. ಕೀರ್ತನಕಾರರೂ ಕಡಿಮೆ. ಪುರಾಣವಸ್ತುಗಳಮೇಲೆ ನಮಗೆ ಮಮತೆಯಿಲ್ಲ. ಕಾಲಕ್ಕೆ ಅನುಸರಿಸಿ ನವೀನ ವಸ್ತುಗಳನ್ನು ನಿರ್ಮಿಸುವ ಶಿಲ್ಪಿಗಳೂ ದುರ್ಲಭರು. ಇಂತಹ ಪರಿಸ್ಥಿತಿಯಕೂಡ ನಾವು ಕಾದಾಡಬೇಕಾಗಿದೆ. ಆದುದರಿಂದ ನಮ್ಮ ಕೈಲಾದಮಟ್ಟಿಗೆ ಕಾಲಾನುರೋಧದಿಂದ ಉಪಾಯಗಳನ್ನು ಯೋಜಿಸಿ ನಮ್ಮ ಬಾಲಕಬಾಲಿಕೆಯರಲ್ಲಿ ಧಾರ್ಮಿಕ ಕಲ್ಪನೆಯ ಅಂಕುರಗಳನ್ನು ಒಡೆಯಿಸಿ ವಿಚಾರಜಲಸೇಚನೆಯಿಂದ ಅವನ್ನು ಬೆಳೆಯಿಸುವುದು ವಿಶೇಷಜ್ಞರ ಕರ್ತವ್ಯವು. ಈ ಕರ್ತವ್ಯವನ್ನು ಸ್ಮರಿಸಿ, ಈ ನಮ್ಮವರ ರುಚಿವೈಚಿತ್ರ್ಯವನ್ನು ಲಕ್ಷ್ಯದಲ್ಲಿ ತಂದುಕೊಂಡು, ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯ ಸಂಪಾದಕರು ವ್ಯವಸಾಯಾಂತರದಲ್ಲಿ ಸಿಲುಕಿಕೊಂಡಿದ್ದರೂ ಪ್ರಸಿದ್ಧವಾದ ಪೌರಾಣಿಕ ಮತ್ತು ಐತಿಹಾಸಿಕ ಕಥೆಗಳಿಗೆ ಆಧುನಿಕ ಸ್ವರೂಪವನ್ನು ಕೊಟ್ಟು, ನಮ್ಮ ಕರ್ನಾಟಕ ಬಾಲಕಬಾಲಿಕೆಯರ ಮುಂದಿರಿಸುವ ಸ್ತುತ್ಯವಾದ ಕಾರ್ಯವನ್ನು ಕೈಕೊಂಡಿರುವರು. ಕರ್ನಾಟಕ ಸಮಾಜಬಂಧುಗಳು ಈ ಮಾತನ್ನು ನೆನಸಿಕೊಂಡು ಅವರ ಕಾರ್ಯಕ್ಕೆ ಮನಮುಟ್ಟಿ ಸಹಾಯಮಾಡಬೇಕೆಂದು ನಮ್ಮ ಆಗ್ರಹದ ಸೂಚನೆಯಿದೆ. ಇನ್ನು ಪ್ರಕೃತದ ಗ್ರಂಥದ ಕಡೆಗೆ ಹೊರಳುವ.

ಪ್ರಪಂಚದೊಳಗಿನ ಸಕಲ ಪ್ರಾಣಿಗಳೂ ತಮಗೆ ಸುಖವಾಗಬೇಕೆಂದು ಬಯಸುವವೇ ಅಲ್ಲದೆ, ಕಷ್ಟವು ಬಂದರೂ ಬರಲಿ, ಎನ್ನುವವರು ಇಲ್ಲವೇ ಇಲ್ಲ. ಅವರು ಕೈಕೊಳ್ಳುವ

ಸಕಲ ಕಾರ್ಯಗಳಲ್ಲಿಯೂ ಸ್ವಸುಖಸಂಪಾದನೆಯೆಂಬ ಉದ್ದೇಶವು ಪ್ರತ್ಯಕ್ಷವಾಗಿ ಇಲ್ಲವೆ ಅಪ್ರತ್ಯಕ್ಷವಾಗಿ ಇದ್ದೇ ಇರುವುದು. ಆದರೆ ಆ ತಮ್ಮ ಧ್ಯೇಯವನ್ನು ಸಂಪೂರ್ಣವಾಗಿ ಕೊನೆಮುಟ್ಟಿಸಿಕೊಳ್ಳುವ ಸಾಮರ್ಥ್ಯವುಳ್ಳವರು ಮಾತ್ರ ಲಕ್ಷಾವಧಿಯಲ್ಲಿ ಒಬ್ಬರು, ಎಂದೋ ಒಂದು ಕಾಲದಲ್ಲಿ ಮಾತ್ರ ನಮಗೆ ಕಂಡುಬರುವರು. ಎಂದಮೇಲೆ ಇದರಲ್ಲಿ ಏನಾದರೂ ಒಂದು ರಹಸ್ಯವು ಇರಲೇಬೇಕು, ಎಂದಂತಾಯಿತು. ಆ ರಹಸ್ಯವನ್ನೇ, ಎಂದರೆ ಯಾವ ತತ್ವವನ್ನು ಮುಂದಿಟ್ಟುಕೊಂಡು ನಡೆದರೆ ಪ್ರಪಂಚದಲ್ಲಿ ನಾವು ಕೈಕೊಂಡಿರುವ ಸಕಲ ಕಾರ್ಯಗಳಿಂದಲೂ ನಮಗೆ ಸುಖವೇ ಆಗುವುದೋ ಆ ತತ್ವಗಳನ್ನು ಈ ಗ್ರಂಥದಲ್ಲಿ ವಿವರಿಸಿ ತೋರಿಸಿದೆ. ಆದುದರಿಂದಲೇ ಇದಕ್ಕೆ " **ಪ್ರಪಂಚಧರ್ಮ** " ಎಂದು ಕರ್ತರು ಹೆಸರನ್ನಿಟ್ಟಿರುವರು. ವಿಶೇಷವಾಗಿ ಗ್ರಂಥದ ೩ (ಶಿವದರ್ಶನರಹಸ್ಯ), ೬ ( ಕೈಲಾಸವಾಸ ), ೮ನೆಯ ( ಉಭಯಸಂಕಟ ) ಪರಿಚ್ಛೇದಗಳನ್ನು ಓದುವಾಗ ಪಾಠಕರು ಹೆಚ್ಚಿನ ತಾತ್ವಿಕದೃಷ್ಟಿಯಿಂದ ಓದಬೇಕೆಂದು ಸೂಚಿಸುವೆವು.

ಕಾದಂಬರಿಗಳೆಂದರೆ ವಾಙ್ಮಯದೊಳಗಿನ ಎಲ್ಲಕ್ಕೂ ಕೊನೆಯ ವರ್ಗದ ಗ್ರಂಥಗಳೆಂದು ಬಹು ಜನರು ನಂಬುವರು. ಪಾಠಕರ ಮನೋರಂಜನೆಯೇ ಕಾದಂಬರಿಗಳ ಉದ್ದೇಶವೆಂದು ಲೇಖಕರು ನಂಬಿ ನಡೆಯುವವರೆಗೆ ಆ ಮಾತು ಸತ್ಯವೇ ಸರಿ. ಆದರೆ ಕಾದಂಬರಿಗಳ ಉದ್ದೇಶವು ಎಂದೂ ಇದಾಗಿರಕೂಡದೆಂದು ನಮ್ಮ ಭಾವನೆಯಿದೆ. ಮತ್ತು ಪ್ರಕೃತದ ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಯವರು ಮುಂದೆ ಇಟ್ಟುಕೊಂಡಿರುವ " ಉದಾತ್ತವಾದ ನೈತಿಕ ತತ್ವಗಳನ್ನು......" ಎಂಬ ಉದ್ದೇಶವು ನಮಗೆ ಸ್ತುತ್ಯವಾದದ್ದಾಗಿ ತೋರುವುದು ಮತ್ತು ಕಾದಂಬರಿಗಳನ್ನು ಬರೆಯತಕ್ಕವರೆಲ್ಲರೂ ಈ ಉದ್ದೇಶವನ್ನೇ ಮುಂದಿಟ್ಟುಕೊಳ್ಳಬಹುದೆಂದು ನನ್ನ ಮನಃಪೂರ್ವಕವಾದ ಸೂಚನೆಯಿರುವುದು. ಈ ಗ್ರಂಥದೊಳಗೆ ಹಿಂದೆ ಹೇಳಿದ ಮೂರು ಪರಿಚ್ಛೇದಗಳಲ್ಲಿ ಉದಾತ್ತವಾದ ನೀತಿ ತತ್ವಗಳ ಮನೋಹರವಾದ ಪ್ರತಿಪಾದನೆಯಿರುವಂತೆ ೧ನೆಯ ಪ. ದೊಳಗಿನ ಹಿಮಾಲಯದ ವರ್ಣನೆ, ೨ನೆಯ ಪ. ದೊಳಗಿನ ಸತಿಯ ಬಾಲ್ಯದ ತಂದೆತಾಯಿಗಳ ಕರ್ತವ್ಯವಿವರಣೆ, ೪-೫ನೆಯ ಪ. ಗಳೊಳಗಿನ ಸತಿಯ ಮದುವೆಯ ವಿಚಾರ ಇವು ಅತಿಶಯ ಹೃದಯಂಗಮವಾಗಿರುವುವು. ಗ್ರಂಥದ ಸರಳವೂ ಶುದ್ಧವೂ ಆದ ಭಾಷೆ, ಚಿತ್ರಮುದ್ರಣಾದಿ ಬಾಹ್ಯಾಂಗಸೌಂದರ್ಯ ಇವನ್ನು ಪಾಠಕರು ಸಹಜವಾಗಿ ತಿಳಿದುಕೊಳ್ಳಬಹುದಾಗಿರುವುದರಿಂದ ಆ ವಿಷಯದಲ್ಲಿ ನಾವೇನೂ ಹೇಳುವ ಆವಶ್ಯಕತೆ ತೋರುವುದಿಲ್ಲ. ಒಟ್ಟಿನಮೇಲೆ, ಕರ್ನಾಟಕ ವಾಙ್ಮಯದ ಅಭಿವೃದ್ಧಿಯನ್ನೇ ಪರಮಧ್ಯೇಯವಾಗಿಟ್ಟುಕೊಂಡಿರುವ ಕರ್ನಾಟಕ ಹಿತೈಷಿಣೀ ಗ್ರಂಥಮಾಲೆಗೆ ಕನ್ನಡ ಬಂಧುಗಳು ಉದಾರ ಹಸ್ತದಿಂದ ಸಹಾಯ ಮಾಡಬೇಕೆಂದೂ, ಅವರು ಕೊಟ್ಟಿರುವ ಅಲ್ಪ ಧನಸಹಾಯಕ್ಕೆ ಪ್ರತಿಯಾಗಿ ಮಾಲೆಯ ಸಂಪಾದಕರು ಅವರಿಗೆ ಅಮೌಲ್ಯವಾದ ಗ್ರಂಥಗಳನ್ನು ಅರ್ಪಿಸುತ್ತಿರುವರೆಂದೂ ಈಗ ಮಾಲೆಯಲ್ಲಿ ಪ್ರಕಟವಾಗಿರುವ ಗ್ರಂಥಗಳಿಂದ ನಾವು ಖಂಡಿತವಾಗಿ ಹೇಳುತ್ತೇವೆ. ಇತಿ.

ಧಾರವಾಡ<br>
ವಿಜಯದಶಮಿ<br>
೧೮೪೭

ಕರ್ನಾಟಕ ಭಾಷಾಜನನಿಯ ನಿಸ್ಸೀಮಭಕ್ತ,<br>
**ನಾರಾಯಣ ರಾಘವೇಂದ್ರ ದೇಶಪಾಂಡೆ.**<br>
ಸನ್ಮಾನಿತ ಕಾರ್ಯದರ್ಶಿ ಕ. ವಿ. ವ. ಸಂಘ.

# ಎರಡನೆಯ ಮುದ್ರಣ

ಜಗನ್ನಿಯಂತನಾದ ಭಗವಂತನ ಕೃಪೆಯಿಂದಲೂ ಕರ್ಣಾಟಕ ಸಮಾಜ ಬಂಧುಗಳ ಸಹಾಯ ಸಂಪತ್ತಿನ ಬಲದಿಂದಲೂ ಈ ದ್ವಿತೀಯ ಮುದ್ರಣದ ಕಾರ್ಯವನ್ನು ಕೈಕೊಳ್ಳುವ ಸಾಹಸ ಮಾಡಿದೆನು. ಈ ಸಂದರ್ಭದಲ್ಲಿ ಮೈಸೂರು ಸೀಮೆಯ ಕನ್ನಡಕ್ಕೆ ಸರಿಹೊಂದುವಂತೆ ಅಲ್ಲಲ್ಲಿಗೆ ಹಲವು ಮಾರ್ಪಾಡುಗಳನ್ನು ಮಾಡಿಕೊಟ್ಟ ಮಹನೀಯರಾದ **ಶ್ರೀ. ಬಿ. ವೆಂಕಟನಾರಾಯಣಪ್ಪನವರು,** ಎಮ್. ಎ. ಅವರ ಉಪಕಾರವನ್ನು ಸದಾಸ್ಮರಿಸುವೆನು.

ಶ್ರೀಸರಸ್ವತೀ ಮಂದಿರಮ್, **ವಿಜಾಪುರ.** | ವಿದ್ವಜ್ಜನ ವಿಧೇಯ,

ವರ್ಷಪ್ರತಿಪದೆ ೧೮೪೩. | **ನಾರಾಯಣ.**

---

# ಮೂರನೆಯ ಮುದ್ರಣ

## University of Bombay.

**NOM: M. 564 OF 1932**

*Bombay, 23rd February, 1932.*

*To,*

**Narayanarao V. Kurdi, Esquire,**
**Shree Saraswatee Mandiram, Dharwar.**

Sir,

I hav the honour to inform you that your publication entitled " **DAKSHAYINI** " has been prescribed in Kannada for Matriculation Examination of the year 1933, and...........

I have the honour etc.

*Sd/–* **S. R. DONGERKERI**
Registrar, University of Bombay.

ಉಪಯುಕ್ತ ರೀತಿಯಾಗಿ ಪ್ರಸ್ತುತ ಪುಸ್ತಕವನ್ನು ಮುಂಬಯಿ ವಿಶ್ವವಿದ್ಯಾನಿಲಯದವರು ಬರುವ ವರ್ಷದ ಮ್ಯಾಟ್ರಿಕ್ಯುಲೇಶನ್ ಪರೀಕ್ಷೆಗೆ ಪಾಠಪುಸ್ತಕವಾಗಿ ಆರಿಸಿರುವುದರಿಂದ ಈ ಮೂರನೆಯ ಮುದ್ರಣದಕಾರ್ಯ ವನ್ನು ಕೈಕೊಳ್ಳಬೇಕಾಯಿತು. ನಮ್ಮ ಅಲ್ಪಶಕ್ತಿಯ ಭಾಷಾಸೇವೆಯ ಕಾರ್ಯಕ್ಕೆ ಹಲವು ವಿಧದಿಂದ ನೆರವಾದ ಎಲ್ಲ ಮಹನೀಯರ ಉಪಕಾರ ವನ್ನು ಮನಃಪೂರ್ವಕವಾಗಿ ಸ್ಮರಿಸುವೆವು.

**ಕನ್ನಡದ ಏಕೀಕರಣವೇ ನಮ್ಮ ಗುರಿ.** ಈ ಧ್ಯೇಯಸಾಧನೆ ಗಾಗಿ ನಾವು ಹದಿಮೂರು–ಹದಿನಾಲ್ಕು ವರುಷಗಳಿಂದಲೂ ನಡೆಯಿಸಿರುವ ಪ್ರಯತ್ನಕ್ಕೆ ತಕ್ಕಂತೆ ಭಗವಂತನು ನಮಗೆ ಸಾಕಾದಷ್ಟು ಯಶಸ್ಸನ್ನೂ ದಯಪಾಲಿಸಿರುವನು. ನಮ್ಮ ಮಾಲೆಯಲ್ಲಿ ಪ್ರಕಟವಾದ ಗ್ರಂಥಗಳು ಅಖಿಲ ಕರ್ಣಾಟಕದಲ್ಲಿಯೂ ಜನಪ್ರಿಯವಾಗಿ ವಿದ್ವಾಂಸರಿಗೆ ಮಾನ್ಯವಾಗಿ ಪ್ರಸಾರಹೊಂದುತ್ತಿರುವುದೇ ಇದಕ್ಕೆ ಸಾಕ್ಷಿ. ಅನೇಕ ಪುಸ್ತಕಗಳು ಮುಂಬಯಿ ಮದ್ರಾಸ ಮೈಸೂರು ಸರಕಾರಗಳ ಸಾಲೆ ಕಾಲೇಜುಗಳಲ್ಲಿ ಪಾಠಪುಸ್ತಕವಾಗಿಯೂ ಅಂಗೀಕೃತವಾಗಿವೆ.

ಎರಡನೆಯ ಮುದ್ರಣದ ಕಾಲದಲ್ಲಿ ಈ ಪುಸ್ತಕವನ್ನು ಬೆಂಗಳೂರಿನ ಶ್ರೀ. ಬಿ. ವೆಂಕಟನಾರಾಯಣಪ್ಪನವರು ಎಮ್. ಎ. ಅವರು ಸಾದ್ಯಂತವಾಗಿ ಓದಿನೋಡಿ ಹಲವು ಮಾರ್ಪಾಡುಗಳನ್ನು ಸೂಚಿಸಿದ್ದರು. ಈ ಮೂರನೆಯ ಮುದ್ರಣದ ಸಮಯದಲ್ಲಿ ಧಾರವಾಡದ ಕರ್ಣಾಟಕ ಕಾಲೇಜಿನ ಕನ್ನಡದ ಆಚಾರ್ಯ ಪದವಿಯಲ್ಲಿರುವ ಪ್ರೊ. ಚೆನ್ನಕೇಶವ ಅಯ್ಯಂಗಾರ್ಯರವರು ಇದನ್ನು ಸಂಪೂರ್ಣವಾಗಿ ಓದಿನೋಡಿ ಹಲವು ತಿದ್ದುಪಡಿಗಳನ್ನು ಸೂಚಿಸಿ ದರು. ಇಂತಹ ಬದಲಾವಣೆಗಳಿಂದ ಈ ಗ್ರಂಥವು ಅಖಿಲ ಕರ್ಣಾಟಕಕ್ಕೂ ಪ್ರಿಯವಾದ, ಮಾನ್ಯವಾದ ಸ್ವರೂಪದಲ್ಲಿ ಪ್ರಕಟವಾಗಿದೆಯೆಂಬುದು ನಮ್ಮ ದೃಢವಾದ ನಂಬುಗೆ. ಬರೆಹಗಾರರಲ್ಲಿ ಎಷ್ಟೋ ಜನರಿಗೆ ಪರರ ಸಲಹೆಗ ಳನ್ನು ಕೇಳಿಕೊಳ್ಳುವುದು ತಮ್ಮ ಗೌರವಕ್ಕೆ ಕುಂದೆಂಬ ಭಾವನೆಯಿದೆ. ಸದ್ಯದ ಪರಿಸ್ಥಿತಿಯಲ್ಲಿ ಕನ್ನಡದ ಬರೆಹಗಾರರು ಈ ತೆರದ ಅಭಿಮಾನವನ್ನಿಟ್ಟು ಕೊಳ್ಳುವುದು ಸ್ವಲ್ಪ ತೊಂದರೆಗೆ ಕಾರಣವಾಗುವುದೆಂದು ನಮ್ಮ ಅನುಭವದ ಹೇಳಿಕೆ. ಕನ್ನಡಕ್ಕಿರುವ ಈ ವಿಪತ್ತು ಇಕ್ಕ ಭಾಷೆಗಳಿಗಿರಲಿಕ್ಕಿಲ್ಲ. ಮೈಸೂರು ಮದ್ರಾಸ ಪ್ರಾಂತಗಳ ಕನ್ನಡಿಗರಿಗೆ ಉತ್ತರಕರ್ನಾಟಕದಲ್ಲಿ

ನಾಡಿಕೆಯಲ್ಲಿರುವ ಎಷ್ಟೋ ಮಾತುಗಳಿಗೆ ಅರ್ಥವೇ ಆಗುವುದಿಲ್ಲ. ಇದು ನಿಜವಾದ ಮಾತು; ಕೇವಲ ಅಭಿಮಾನಕ್ಕಾಗಿ ಇಲ್ಲವೆ ಪರದೂಷಣೆಗಾಗಿ ಅವರು ಆಡಿಕೊಳ್ಳುವ ಅನಾದರದ ಭಾವನೆಯಲ್ಲ. ಹಾಗೆಯೇ ಮುಂಬೈ ಪ್ರಾಂತದವರಿಗೆ ಅರ್ಥವಾಗದ ಹಲವು ಪದಪ್ರಯೋಗಗಳು ಮಿಕ್ಕ ಪ್ರಾಂತದವರ ಬರೆಹದಲ್ಲಿ ಆಗಾಗ ತೋರುತ್ತಿವೆ. ಇಂತಿರುವಾಗ ಒಂದು ಪ್ರಾಂತದವರ ಪುಸ್ತಕಗಳನ್ನು ಮಿಕ್ಕ ಪ್ರಾಂತಗಳ ಜನರು ಆದರದಿಂದ ಓದುವ ಬಗೆ ಹೇಗೆ ? ಹಾಗೇ ಎಲ್ಲರಿಗೂ ಒಪ್ಪಿಗೆಯಾಗಬೇಕಾದ ಪುಸ್ತಕಗಳನ್ನು ಪರ ಪ್ರಾಂತದ ತಜ್ಞರ ಸಹಾಯದಿಂದ ತಕ್ಕ ಮಾರ್ಪಾಡುಗಳೊಡನೆ ಪ್ರಕಟಿಸಿದರೆ ತಪ್ಪೇನು ? ಅದು ಮೂಲ ಗ್ರಂಥಕರ್ತನ ಯೋಗ್ಯತೆಗೆ ಕುಂದು ತರುವುದೆಂದರೆ ಅರ್ಥವೇನು ?

ಒಂದು ಪ್ರಾಂತದವರ ಯೋಗ್ಯವಾದ ಪುಸ್ತಕಗಳನ್ನು ಇನ್ನುಳಿದ ಪ್ರಾಂತಗಳವರು ಸಾಲೆ ಕಾಲೇಜುಗಳಲ್ಲಿ ಪಾಠಪುಸ್ತಕವಾಗಿ ಸ್ವೀಕರಿಸುವುದು ಕನ್ನಡದ ಏಕೀಕರಣದ ದೃಷ್ಟಿಯಿಂದ ಬಹುಪ್ರಯೋಜನಕಾರಿಯಾಗಿದೆ. ಈ ಮಾತನ್ನು ಮುಂಬೈ ಪ್ರಾಂತದವರು ಒಪ್ಪಿಕೊಂಡಂತಿದೆ. ಹೈಸ್ಕೂಲು ಕಾಲೇಜುಗಳ ಯಾವುದೇ ವರ್ಷದ ಪಾಠಪುಸ್ತಕಗಳ ಪಟ್ಟಿಯನ್ನು ತೆಗೆದರೂ ಅದರಲ್ಲಿ ತೀರ ಕಡಿಮೆಯೆಂದರೆ ಒಂದೆರಡಾದರೂ ಮೈಸೂರಿನವರ ಪುಸ್ತಕಗಳು ಇದ್ದೇ ಇರುವುವು. ಮಂಗಳೂರಿನವರ ಪುಸ್ತಕಗಳಿಗೂ ಅಲ್ಲಿ ಅನಾದರವಿಲ್ಲ. ಮುಂಬೈ ವಿಶ್ವವಿದ್ಯಾನಿಲಯದ ಕನ್ನಡ ಪಾಠಪುಸ್ತಕಗಳನ್ನು ಆರಿಸುವ ಸಮಿತಿಯವರೂ ಈ ಮಾತನ್ನು ಒಪ್ಪಿಕೊಂಡಂತಿದೆ; ಕೆಲವರು ಹಾಗೆ ಒತ್ತಾಸೆಯನ್ನೂ ತೋರುತ್ತಿರುವರಂತೆ. ಮೈಸೂರು ಮದ್ರಾಸಗಳ ಸರಕಾರದವರೂ ಈ ತೊಡಕನ್ನು ಇತ್ತೀಚೆಗೆ ಆದರದಿಂದ ಬಿಡಿಸಲು ಯತ್ನಿಸುತ್ತಿರುವುದು ಸಂತೋಷದ ಸಂಗತಿಯಾಗಿದೆ. ಭಗವತಿ ಕರ್ಣಾಟಕಾಂಬೆಯ ವರಪ್ರಸಾದದಿಂದ ಕನ್ನಡದ ಏಕೀಕರಣದ ದಾರಿಯು ಸುಗಮವಾಗಿ ಅಖಿಲ ಕರ್ಣಾಟಕಕ್ಕೂ ಒಂದೇ ಒಂದು ಬರೆಹದ ಭಾಷೆಯಾಗಿ ಕನ್ನಡ ವಾಙ್ಮಯದ ಅಭಿವೃದ್ಧಿಯಾಗಲಿ !

ಮೇಲೆ ಬರೆದಂತೆ ಪ್ರಸ್ತುತ ಪುಸ್ತಕದ ಅಂತಸ್ಥ ರಚನೆಯಲ್ಲಿ ತಕ್ಕ ಬದಲಾವಣೆಗಳನ್ನು ಮಾಡಿರುವಂತೆಯೇ ಹೆಚ್ಚು ಸುಂದರವಾದ ಚಿತ್ರಗಳನ್ನು ಸೇರಿಸಿ ಒಳ್ಳೆಯ ಬೆಂಡು ಕಾಗದದಲ್ಲಿ ಜಯಕರ್ನಾಟಕ ಮುದ್ರಣಾಲಯದಲ್ಲಿ ಅಂದವಾಗಿ ಮುದ್ರಿಸಿ ಗ್ರಂಥದ ಬಾಹ್ಯಾಂಗವನ್ನು ಸಿಂಗರಿಸುವುದಕ್ಕೂ

ನಮಗೆ ಸಾಧ್ಯವಾದಷ್ಟು ಯತ್ನಿಸಿರುವೆವು. ಈ ಕಾರ್ಯಗಳಲ್ಲಿ ನಮಗೆ ನೆರವಾದ ಶ್ರೀ. ಬಿ. ವೆಂಕಟನಾರಾಯಣಪ್ಪನವರು, ಶ್ರೀ. ಚೆನ್ನಕೇಶವ ಅಯ್ಯಂಗಾರ್ಯರು ಈ ಮಹನೀಯರಿಗೆ ಸವಿನಯ ವಂದನೆಗಳನ್ನು ಸಮರ್ಪಿಸುವೆವು. ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ಜಯಕರ್ನಾಟಕ ಮುದ್ರಣಾಲಯದ ಒಡೆಯರಾದ ಶ್ರೀ. ರಾಯದುರ್ಗ ಕೃಷ್ಣರಾಯರ ಉಪಕಾರವನ್ನು ಸ್ಮರಿಸುವೆವು. ಮಹಿಷಮಂಡಲದಲ್ಲಿ **ಕರ್ಣಾಟಕ ಸಿಂಹಾಸನಾಧೀಶರಾಗಿ** ಅಖಿಲಕರ್ಣಾಟಕದ ಪ್ರಜೆಗಳ ಮನಸ್ಸನ್ನೂ ಆಳುತ್ತಿರುವ ಮಹಾಪ್ರಭು **ಶ್ರೀ. ನಾಲ್ವಡಿ ಶ್ರೀಕೃಷ್ಣ ರಾಜೇಂದ್ರ ಒಡೆಯರವರಿಗೆ** ಭಗವಂತನು ಆಯುರಾರೋಗ್ಯ ಭಾಗ್ಯಗಳನ್ನು ದಯಪಾಲಿಸಲೆಂದು ಬೇಡಿಕೊಂಡು,

**ಹರಿಯೆ ನಿನ್ನೊಳು ಭಕ್ತಿ ಮುಕ್ತಿಗೆ।**
**ಸರಳ ಮಾರ್ಗವದೆಂಬುದರಿಯದೆ।**
**ತಿರುತಿರುಗಿ ಮಾಯಾ ಪ್ರಪಂಚದಿ ಸುತ್ತಿ ಬೇಸತ್ತೆ ॥**
**ಪರಮಭಕ್ತಿಯೊಳೀಗ ನಿನ್ನಯ।**
**ಚರಣ ತಲದಲಿ ಬಿದ್ದು ಬೇಡುವೆ।**
**ಪರಿಹರಿಸೊ ನರಜನ್ಮವನು ಕೊಂಡೀ ಸುಮಾಂಜಲಿಯ ॥**

ಹೀಗೆಂದು ಪ್ರಾರ್ಥಿಸಿ ಈ ಚಿಕ್ಕ ಕುಸುಮವನ್ನು ಆ ದಯಾಮಯನ ಚರಣಾರವಿಂದಗಳಿಗರ್ಪಿಸಿ ನನ್ನ ನಿವೇದನೆಯನ್ನು ಮುಗಿಸುವೆನು.

ಮಹಾಶಿವರಾತ್ರಿ, ೧೮೫೩.
ಶ್ರೀ. ಸರಸ್ವತೀ ಮಂದಿರಮ್, ಧಾರವಾಡ.

**—ನಾರಾಯಣ.**

## ಅನುಕ್ರಮಣಿಕೆ


| | |
|---|---|
| ಮೊದಲನೆಯ ಪರಿಚ್ಛೇದ ... ... ... | ಜನ್ಮೋತ್ಸವ. |
| ಎರಡನೆಯ ಪರಿಚ್ಛೇದ ... ... ... | ಬಾಲ್ಯ. |
| ಮೂರನೆಯ ಪರಿಚ್ಛೇದ ... ... ... | ಶಿವದರ್ಶನರಹಸ್ಯ. |
| ನಾಲ್ಕನೆಯ ಪರಿಚ್ಛೇದ ... ... ... | ವಿವಾಹವಿಚಾರ. |
| ಐದನೆಯ ಪರಿಚ್ಛೇದ ... ... ... | ವಿವಾಹೋತ್ಸವ. |
| ಆರನೆಯ ಪರಿಚ್ಛೇದ ... ... ... | ಕೈಲಾಸವಾಸ. |
| ಏಳನೆಯ ಪರಿಚ್ಛೇದ ... ... ... | ಯಜ್ಞೋತ್ಸವ. |
| ಎಂಟನೆಯ ಪರಿಚ್ಛೇದ ... ... ... | ಭಯಸಂಕಟ. |
| ಒಂಬತ್ತನೆಯ ಪರಿಚ್ಛೇದ ... ... ... | ಪರಿಸಮಾಪ್ತಿ. |



भीतिर्नास्ति भुजंगपुंगवविषात्प्रीतिर्न चन्द्रामृता-
न्नाशौचं हि कपाल-दाम-लुलनाच्छौचं न गंगाजलात्
नोद्वेगश्चिति भस्मना न च सुखं गौरी-स्तनालिंगना
दात्मारामतया हिताहितसमः स्वस्थो हरः पातु वः ॥

The Indian Art Press, Kalbadevi, Bombay, 2.

|| ಶ್ರೀಃ ||

# ದಾಕ್ಷಾಯಿಣಿ

## ಮೊದಲನೆಯ ಪರಿಚ್ಛೇದ

## ಜನ್ಮೋತ್ಸವ

ಭೀತಿರ್ನಾಸ್ತಿ ಭುಜಂಗ ಪುಂಗವ ವಿಷಾತ್ಪ್ರೀತಿರ್ನಚಂದ್ರಾಮೃತಾ- |
ನ್ನಾಶೌಚಂ ಹಿ ಕಪಾಲದಾಮ ಲುಲನಾಚ್ಛೌಚಂ ನ ಗಂಗಾ ಜಲಾತ್ ||
ನೋದ್ವೇಗಶ್ಚಿತಿ ಭಸ್ಮನಾ ನ ಚ ಸುಖಂ ಗೌರೀಸ್ತನಾಲಿಂಗನಾ |
ದಾತ್ಮಾರಾಮತಯಾ ಹಿತಾಹಿತಸಮಃ ಸ್ವಸ್ಥೋ ಹರಃ ಪಾತು ವಃ ||




ಣ್ಯಭೂಮಿ ಭರತಖಂಡದ ಉತ್ತರಮೇರೆಯನ್ನು ಆಕ್ರಮಿಸಿರುವ ಹಿಮಾಚಲವು ಸಾಗರವೇಷ್ಟಿತಳಾದ ಭೂಮಾತೆಯ ಸ್ಫಟಿಕಮಯವಾದ ಶಿರೋಭೂಷಣ ದಂತೆ ವಿರಾಜಿಸುತ್ತಿರುವುದು. ವಿಪುಲವೂ ಅನಂತವೂ ಅಚ್ಛೇದ್ಯವೂ ಅಭೇದ್ಯವೂ ಆದ ಶೈಲಮಾಲೆಗಳು ಒಂದರ ಮೇಲೊಂದು, ಉನ್ನತೋನ್ನತವಾದ ಶಿಖರಗಳನ್ನು ಧರಿಸಿ, ಯುಗ ಯುಗಾಂತರಗಳಿಂದಲೂ ಅವಿರತವಾಗಿ ವಿರಾಜಿಸುತ್ತ ಪೂರ್ವಪಶ್ಚಿಮ ಹಬ್ಬಿರುವುವು. ಈ ಶೃಂಗಾವಲಿಗಳು ಒಂದೆಡೆಯಲ್ಲಿ ಅತ್ಯುನ್ನತವಾಗಿ ಒಂದೆಡೆ ಯಲ್ಲಿ ಆಕಾಶಚುಂಬಿಯಾಗಿ ಒಂದೆಡೆಯಲ್ಲಿ ಅಭ್ರಭೇದಿಯಾಗಿ ಮೆರೆವುವು.

ಇವುಗಳನ್ನು ನೋಡಿದರೆ ಸ್ವರ್ಲೋಕಕ್ಕೂ ಭೂಲೋಕಕ್ಕೂ ಸಂಬಂಧ ವನ್ನುಂಟು ಮಾಡಿದ ಸೋಪಾನಾವಲಿಯೆಂದು ಒಮ್ಮೆ ಭಾಸವಾಗುವುದು; ಮತ್ತೊಮ್ಮೆ ಈ ಪರ್ವತಶೃಂಗಗಳು ಮುಂದೆ ಯಾವುದೋ ಒಂದು ಅಜ್ಞಾತ ವಾದ ಅನಂತಲೋಕವನ್ನು ಧರಿಸಿ ನಿಂತಿರುವ ಧರಣೀಧರನ ಮಹಾ ಜಂಘೆ ಗಳಂತೆ ತೋರುವುವು. ಶಿವನ ಜಟೆಯಿಂದ ಗಲಿತಳಾದ ಗಂಗಾದೇವಿಯು ಈ ಸೋಪಾನಮಾರ್ಗದಿಂದಲೇ ಭೂಲೋಕಕ್ಕೆ ಇಳಿದು ಬಂದು ಭಾರತ ಭೂಮಾತೆಯನ್ನು ಪಾವನಗೈದಳು. ಧನ್ಯ ಭೂಮಾತೆ! ಧನ್ಯ ಗಂಗಾಮಾತೆ!

ತ್ರಿಪಥಗಾಮಿನಿಯಾದ ಗಂಗಾದೇವಿಯು ಸ್ವರ್ಲೋಕದಿಂದ ಇಳಿದು ಬಂದು ಭೂಲೋಕಕ್ಕೆ ಮುಟ್ಟಿದ ಸ್ಥಳದಲ್ಲಿ ಪುರಾತನ ಕಾಲದಲ್ಲಿ **ದಕ್ಷಪುರಿ** ಯೆಂಬ ಮಹಾವೈಭವಯುಕ್ತವಾದ ನಗರವೊಂದು ವಿರಾಜಿಸುತ್ತಲಿದ್ದಿತು. ಪ್ರಜಾಪತಿ **ದಕ್ಷಬ್ರಹ್ಮನು** ಆ ನಗರದ ಒಡೆಯನು. ಸಕಲ ಸಂಪತ್ತು ಗಳಿಂದ ವಿರಾಜಿಸುತ್ತಲಿರುವ ಆ ಪಾರ್ವತ್ಯನಗರವು ಅತುಲವೂ ಅವರ್ಣ ನೀಯವೂ ಅನಂತವೂ ಆದ ಸೃಷ್ಟಿಸೌಂದರ್ಯದಿಂದ ಆವೃತವಾಗಿದ್ದಿತು. ಜಗದ್ವಿಖ್ಯಾತವಾದ ಹಿಮಾಲಯದ ಪ್ರಾಕೃತಿಕ ಮನೋಹರತೆಯನ್ನು ಎಷ್ಟೆಂದು ಬಣ್ಣಿಸಬಹುದು ?

ಲೋಕವಿಖ್ಯಾತನಾದ ಆ ಧರಣೀಧರನ ಸುದೀರ್ಘವಾದ ಶರೀರದ ಒಂದೆಡೆಯಲ್ಲಿ ವಿಶಾಲವಾದ ಅರಣ್ಯವು ಅನಾದಿಕಾಲದಿಂದಲೂ ಗಗನಚುಂಬಿ ಗಳಾದ ಚಂದನ ದೇವದಾರು ಮುಂತಾದ ವೃಕ್ಷಗಳಿಂದ ಒಪ್ಪುತ್ತಿರುವುದು. ಆ ವೃಕ್ಷಗಳ ಇಡಿಕಿರಿದ ಎಲೆಗಳ ರಾಶಿಗಳೊಳಗಿಂದ ಒಳಗೆ ಸೇರಲು ಸೂರ್ಯ ಚಂದ್ರರ ಕಿರಣಗಳಿಗೂ ಅವಕಾಶವಿರಲಿಲ್ಲ. ಆ ವೃಕ್ಷಗಳಿಗೆ ಸುತ್ತಿಕೊಂಡ ತರತರದ ಕೋಮಲ ಲತೆಗಳು ಮಂದಮಾರುತನ ಬಲಾತ್ಕಾರಕ್ಕೆ ನಡು ಗುತ್ತಿರುವುವೋ ಎಂಬಂತೆ ಮೆಲ್ಲಮೆಲ್ಲನೆ ತೊನೆಯುತ್ತಿರುವುವು. ಅಸಂಖ್ಯ ವಾದ ಚಿಕ್ಕ ದೊಡ್ಡ ವನಸ್ಪತಿಗಳು ರಾಶಿರಾಶಿಯಾಗಿ ಬೆಳೆದು ತಮ್ಮ ತಮ್ಮ ಕರ್ಮಾನುಗುಣವಾದ ಜನನ ಜೀವನ ಮರಣಗಳ ಆಟದಲ್ಲಿ ಆಸಕ್ತವಾಗಿ ದ್ದುವು! ಹಲವು ಕಾಲಕಾಲಕ್ಕೆ ಪೂತು ಕಾತು ಮನೋಹರವಾಗಿ ತೋರುತ್ತಿದ್ದುವು: – ಒಂದರಲ್ಲಿ ಹೂವಾಗಿರುವುದು; ಮತ್ತೊಂದರಲ್ಲಿ ಚಿಕ್ಕ ಮಿಡಿಗಳ ಗೊಂಚಲು ಅಲೆಯುತ್ತಿರುವುದು; ಇನ್ನೊಂದರಲ್ಲಿ ಹಣ್ಣುವರಿದ

ಫಲಮಂಜರಿಗಳಿಂದ ಕೊಂಬೆಗಳು ಬಾಗಿ ನಿಂತಿರುವುವು; ಸಮೀಪದಲ್ಲಿ ಒಂದೆರಡು ಗಿಡಗಳು ತೊಗಟೆಗಳೆದು ಟೊಂಗೆಗಳು ಆಗಾಗ ಒಣಗಿ ಹೋಗುತ್ತ ಬಂದು ಬೋಳಾಗಿ ನಿಂತಿರುವುವು; ಕೆಲವು ಎಲೆಯಿಲ್ಲದೆ ಬರಲಾಗಿ ನಿಂತಿರುವುವು; ಬಳಿಯಲ್ಲಿಯೇ ಒಂದೆರಡು ಗಿಡಗಳು ಒಣಗಿ ನಿಂತಿರುವುದೂ ಉಂಟು. ಸೂಕ್ಷ್ಮದೃಷ್ಟಿಯಿಂದ ನೋಡಿದರೆ ಸೃಷ್ಟಿಯಲ್ಲಿ ಸುಖದುಃಖಗಳ ದ್ವಂದ್ವವು ಸರ್ವತ್ರ ಗೋಚರವಾಗುವುದು.

ಆ ಪರ್ವತರಾಜನ ಸುವಿಶಾಲವಾದ ಶರೀರದ ಗಿರಿಶಿಖರಗಳ ಸಾಲಿನ ಇಳಿಕಲಿನಲ್ಲಿ ದಟ್ಟವಾಗಿ ಬೆಳೆದ ಕಿರುಹುಲ್ಲಿನ ಹಸುರು ಛಾಯೆಯು ಮರಕತ ಮಣಿಯ ಪ್ರಭೆಯನ್ನು ದಿಕ್ಕು ದಿಕ್ಕುಗಳಿಗೆ ಪಸರಿಸುವುದು. ಆ ಹಸುರು ಹುಲ್ಲಿನ ತುದಿಯಲ್ಲಿ ಅರಳಿನಿಂತಿರುವ ಹಲವು ಬಣ್ಣದ ಚಿಕ್ಕ ದೊಡ್ಡ ಹೂಗಳ ರಾಶಿಯನ್ನು ನೋಡಿದರೆ ಹಸುರು ಶಿಲೆಯ ನೆಲೆಗಟ್ಟಿನಲ್ಲಿ ಸಮೆದ ವಿಧವಿಧದ ಬಣ್ಣದ ಚಿಕ್ಕ ದೊಡ್ಡ ಹರಳುಗಳ ಕೆತ್ತನೆಯ ಕೆಲಸವು ಸ್ಮರಣೆಗೆ ಬರುವುದು. ಬಳಿಯಲ್ಲಿರುವ ಕಂದರವೊಂದರಲ್ಲಿ ಸ್ಫಟಿಕದಂತೆ ಸ್ವಚ್ಛವಾದ ನೀಲವರ್ಣದ ಜಲರಾಶಿಯಿಂದೊಪ್ಪುವ ಚಿಕ್ಕ ಸರೋವರವಿರುವುದು. ಅದರಲ್ಲಿ ರಾಶಿರಾಶಿಯಾದ ಕುಮುದ ಕುವಲಯ ಕಲ್ಹಾರಗಳು ಅರಳಿ ಮಗಮಗಿಸುತ್ತಿರುವುವು. ಚಕ್ರವಾಕಗಳು ಹಾರಾಡುವುವು; ಹಂಸಗಳು ಕುಣಿಯುವುವು. ನೆರೆಯಲ್ಲಿಯೇ ಬಿದಿರಿನ ಹಿಂಡುಗಳಲ್ಲಿ ಗಾಳಿಯು ಸುಯ್ಯೆಂದು ಹಾಯುತ್ತಿರಲು ಅಲ್ಲಾಡುವ ಬಿದಿರುಗಳ ಘರ್ಷಣದಿಂದ ಮನೋಹರವಾದ ಸ್ವರವು ಹುಟ್ಟಿ ವನದೇವತೆಯ ಇಂಪಾದ ಗಾಯನ ಧ್ವನಿಯೆಂಬಂತೆ ತೋರುವುದು.

ಆ ಮಹಾರಣ್ಯದೊಳಗಿನ ಮರಮರದಲ್ಲಿಯೂ ಚಿತ್ರವಿಚಿತ್ರವಾದ ಪಕ್ಷಗಳುಳ್ಳ ಪಕ್ಷಿಸಮೂಹವೂ ಅಡವಿಯಡವಿಯಲ್ಲಿ ವಿಧವಿಧದ ಪಶುಸಮೂಹವೂ ಸುಖಾವಹವಾದ ತೃಣಶಯ್ಯೆಯಲ್ಲಿ ತರತರದ ಕ್ರಿಮಿಕೀಟಕಗಳೂ ಸದಾ ಸುಖದಿಂದ ಕಾಲಕಳೆಯುವುವು. ಕೃಷ್ಣವರ್ಣದ ಪರ್ವತಖಂಡದಂತೆ ತೋರುತ್ತಿರುವ ಕರಿಯ ಆನೆಗಳ ಹಿಂಡು ಘೀಳಿಡುತ್ತ ಉನ್ಮತ್ತತೆಯಿಂದ ಸಿಕ್ಕಿ ಸಿಕ್ಕಿದ ಗಿಡಮರಗಳನ್ನು ಮುರಿದು ಎಸೆಯುತ್ತ ಸಂಚರಿಸುವುದು. ಕೃಷ್ಣ ಮೃಗಗಳು ಅಲ್ಲಲ್ಲಿಗೆ ಹಿಂಡುಗಟ್ಟಿಕೊಂಡು ಮೆಲಕಾಡಿಸುತ್ತ ನಿಂತಿರುವುವು; ಗಂಡುಮೃಗವು ತನ್ನ ಕೋಡಿನಿಂದ ಮೆಲ್ಲ ಮೆಲ್ಲನೆ ಹೆಣ್ಣು ಮೃಗದ

ಕಣ್ಣಿನ ಬಳಿಯಲ್ಲಿ ತುರಿಸುವುದು. ಹಿಂಹ ವರಾಹ ಶಾರ್ದೂಲ ವನಮಹಿಷಾದಿ ಉಗ್ರಪ್ರಾಣಿಗಳು ತಮ್ಮ ತಮ್ಮ ಮನಸ್ಸುಬಂದಂತೆ ಸಂಚರಿಸುತ್ತಿರುವುವು; ತಮ್ಮ ಬಲದಿಂದ ದುರ್ಬಲಪ್ರಾಣಿಗಳನ್ನು ಮುರಿದು ತಿಂದು ಹೊತ್ತು ಬಂದಾಗ ಒಂದರೊಡನೊಂದು ಕಾದಾಡಿ ಕಾಲವನ್ನು ಕಳೆಯುತ್ತಿರುವುವು. ಆಶ್ಚರ್ಯದ ಮಾತೇನೆಂದರೆ, ತಮ್ಮೆಲ್ಲರಿಗೂ ಅತ್ಯಂತ ಬಲಶಾಲಿಯಾದ ವೈರಿಯೊಬ್ಬನಿರುವನೆಂಬ ಮಾತಿನ ಕಡೆಗೆ ಮಾತ್ರ ಯಾರ ಲಕ್ಷ್ಯವೂ ಇರದು. ಹಿಮಾಚಲದಲ್ಲಿಯ ಹೇಮಂತರಾಜನ ಶಾಸನಕ್ರಮವನ್ನು ಕೇಳುವುದೇನಿದೆ? ಆತನ ಆಗಮನಸೂಚಕವಾದ ಈಶಾನ್ಯಮಾರುತನ ಡಂಗುರ ಧ್ವನಿಯನ್ನು ಕೇಳಿದೊಡನೆಯೇ ಗಿಡಮರಗಳು ಗಡಗಡನೆ ನಡುಗಿ ಎಲೆಗಳೆದು ತೊಗಟೆಗಳನ್ನು ಬಿಚ್ಚಿ ಬರಲಾಗಿ ನಿಲ್ಲುವುವು. ಪಶುಪಕ್ಷಿ ಕ್ರಿಮಿ ಕೀಟಕಗಳಿಗೆಒಳಗಿನ ಉಸಿಲು ಒಳಗೆ ಹೊರಗಿನ ಉಸಿಲು ಹೊರಗೆ ಹೀಗಾಗಿ ಹೋಗುವುದು; ಕೆಲವು ಹಿಮದಲ್ಲಿ ಹುಗಿದುಹೋಗುವುವು. ಆದರೆ ಇದೊಂದು ಗುಣ: ಎಲ್ಲಿಯವರೆಗೆ ಈ ತೆರದ ಮಹಾಸಂಕಟವು ಪ್ರತ್ಯಕ್ಷವಾಗಿ ಬರುವುದಿಲ್ಲವೋ ಅಲ್ಲಿಯವರೆಗೂ ಅವಕ್ಕೆ ಅದರ ಅರಿವೇ ಇರದು; ಸಂಕಟ ನಿವಾರಣೆಯಾದ ಮರುದಿನವೇ ಅವುಗಳ ಆನಂದಕ್ಕೆ ಪಾರವೇ ಇರದು. ಆದುದರಿಂದ ಭವಿಷ್ಯದ ಸಂಕಟವನ್ನು ಸ್ಮರಿಸಿ ಈಗಲೇ ಎದೆಯೊಡಕೊಂಡು ಬೆಂದು ಬೆಂಡಾಗುವ, ಹಿಂದಿನ ಸುಖದುಃಖಗಳನ್ನು ಇಂದು ಪುನಃ ಪುನಃ ಸ್ಮರಿಸಿಕೊಂಡು ಅನ್ನಾಹಾರಗಳನ್ನು ತೊರೆದು ಕಣ್ಣೀರಿಡುವ ಸುವಿಚಾರಿಯೆಂಬ, ಅಹಂಕಾರದ ಮೂರ್ತಿ ಮಾನವನ ಸ್ಥಿತಿಗಿಂತಲೂ ಈ ಗಿಡಮರ, ಪಶುಪಕ್ಷಿ, ಕ್ರಿಮಿಕೀಟಕಗಳ ಅವಸ್ಥೆಯೇ ಸಾವಿರಪಾಲಿಗೆ ಮೇಲೆನಿಸುವುದು.

ಈ ಬಗೆಯ ಅವರ್ಣನೀಯವಾದ ಸೃಷ್ಟಿಸೌಂದರ್ಯದಿಂದ ಆವೃತವಾದ ದಕ್ಷಪುರಿಯ ಮಧ್ಯಭಾಗದಲ್ಲಿ ದಕ್ಷರಾಜನ ಅರಮನೆಯಿರುವುದು. ಅರ್ವಾಚೀನ ಕಾಲದ ರಾಜಧಾನಿಗಳಂತೆ ಈ ದಕ್ಷರಾಜನ ರಾಜಧಾನಿಗೆ ಮಾನವಕೃತ ಕೋಟೆಕೊತ್ತಳಗಳೇನೂ ಇರಲಿಲ್ಲ. ಕೃತಿಮವಾದ ಕಾವಲು ಸೋವಲುಗಳೂ ಕಡಿಮೆ. ದಕ್ಷರಾಜನ ಅರಮನೆಯು ಒಂದು ಪರ್ವತ ಶಿಖರದ ಇಳಿಕಲಿನಲ್ಲಿರುವುದು. ಕೆಳಗಡೆಗೆ ಪುಣ್ಯನದಿ ಭಾಗೀರಥಿಯ ಶಾಖೆಯಾದ ನೀಲಧಾರೆಯು ಸ್ಫಟಿಕಸ್ವಚ್ಛವಾದ ತಿಳಿನೀರಿನಿಂದ ಒಪ್ಪುತ್ತಿರುವುದು.

ಆದರ ತಳದಲ್ಲಿರುವ ಹರಳುಗಳೂ ಉಸುಕೂ (ಮಳಲೂ) ಆನಂದದಿಂದ ಚಕ ಚಕನೆ ಹೊಳೆಯುತ್ತ ಶರವೇಗದಿಂದ ಈಜುತ್ತಿರುವ ಚಿಕ್ಕ ದೊಡ್ಡ ಮೀನು ಗಳೂ ನೋಡುವವರ ಚಿತ್ತಾಕರ್ಷಕವಾಗಿರುವುವು. ಆ ನೀಲಧಾರೆಗೆ ಕೃತ್ರಿಮ ವಾದ ಕಟ್ಟೆ ಮೆಟ್ಟುಗಳೇನೂ ಇರಲಿಲ್ಲ. ಪ್ರಾಚೀನರಿಗೆ ಸ್ವಾಭಾವಿಕ ವಾದ ಸೃಷ್ಟಿಸೌಂದರ್ಯಗಳ ಮೇಲೆಯೇ ಬಲು ಅಕ್ಕರತೆ. ಸೃಷ್ಟಿದೇವತೆ ಸೃಷ್ಟಿಸಿರುವ ಅನುಪಮ ಸೌಂದರ್ಯಸುಧೆಗೆ ಮನುಷ್ಯಕೃತಿಯು ಹಿಟ್ಟಿನ ನೀರು ಸರಿಗಟ್ಟುವುದೆಂತು? ಆದುದರಿಂದಲೇ ದಕ್ಷರಾಜನು ಕೂಡ ತನ್ನ ಅರಮನೆಯ ಮುಂದಿನ ನೀಲಧಾರೆಗೆ ಕೃತಿಮವಾದ ವಿಕೃತಿಯನ್ನುಂಟು ಮಾಡಿರಲಿಲ್ಲ. ಸುತ್ತಲಿನ ವನದೇವತೆಯ ಸೊಬಗನ್ನೂ ಆತನು ಕೆಡಿಸಿರಲಿಲ್ಲ. ಸಂಧ್ಯಾಕಾಲದಲ್ಲಿ ರಾಜನು ನೀಲಧಾರೆಯ ದಂಡೆಯಲ್ಲಿರುವ ವಿಶಾಲವಾದ ಹಾಸುಗಲ್ಲಿನ ಮೇಲೆ ಬಿಲ್ವವೃಕ್ಷದ ನೆರಳಿನಲ್ಲಿ ರಾಜಸಭೆಯನ್ನು ನೆರೆಯಿಸು ವನು. ಆತನಿಗೆ ಮಾನವೀಕೃತಿಯ ಬೆಳ್ಳಿಬಂಗಾರ ಹರಳು ಕಲ್ಲುಗಳ ರಚನೆಯ ಬಹು ಮೌಲ್ಯವಾದ ಸಿಂಹಾಸನಕ್ಕಿಂತ ಈಶ್ವರೀಕೃತಿಯ ಅಮೌಲ್ಯವಾದ ಪಾಷಾಣಾಸನದ ಮೇಲೆಯೇ ಬಲು ಅಕ್ಕರೆ. ಅರಸನಿಗೆ ತಕ್ಕ ಅರಿಸಿ; ಅವರಿಗೆ ತಕ್ಕ ಮಂತ್ರಿ ಪರಿಜನರು! ಪ್ರಜೆಗಳು! ಎಲ್ಲರಿಗೂ ಸೃಷ್ಟಿಯ ಸಹಜ ಸೌಂದರ್ಯದ ಮೇಲೆಯೇ ಬಹು ಮಮತೆ.

ಇಂತೀ ಪರಿಯಿಂದ ಮೆರೆಯುವ ದಕ್ಷಪುರಿಯಲ್ಲಿ ಇಂದು ಆನಂದ ಕೋಲಾಹಲವು ತುಂಬಿ ಹೊರಸೂಸುತ್ತಿದ್ದಿತು. ಸರ್ವತ್ರ ಗುಡಿತೋರಣ ಗಳು ವಿರಾಜಿಸುತ್ತಿದ್ದುವು. ಮನೆಮನೆಯಲ್ಲಿ ಮಹೋತ್ಸವ. ಬಾಗಿಲಲ್ಲಿ ತಳಿರತೋರಣಗಳನ್ನು ಕಟ್ಟಿ, ಅವಕ್ಕೆ ಪೂಮಾಲೆಗಳನ್ನು ಅಲೆಯಬಿಟ್ಟು, ಅಂಗಳದಲ್ಲಿಯೂ ಮನೆಯಲ್ಲಿಯೂ ಹಿಟ್ಟು ಕುಂಕುಮಗಳ ರಂಗವಲ್ಲಿಯ ನ್ನಿಕ್ಕಿ ಸಿಂಗರಿಸಿದ್ದರು. ಜನರ ಮುಖದಲ್ಲಿ ಆನಂದದ ತರಂಗಗಳು ಉಕ್ಕಿ ಬರುತ್ತಿದ್ದುವು. ಪುರುಷರೂ ಸ್ತ್ರೀಯರೂ ತರುಣರೂ ವೃದ್ಧರೂ ಬಾಲಕ ಬಾಲಿಕೆಯರೂ ಹೊಸ ಬಟ್ಟೆಗಳನ್ನುಟ್ಟು ಪೆಟ್ಟಿಗೆಯಲ್ಲಿಟ್ಟಿದ್ದ ಅಲಂಕಾರ ಗಳನ್ನೆಲ್ಲಾ ಧರಿಸಿಕೊಂಡಿದ್ದರು. ಆದುದರಿಂದ ಜನಸಮೂಹವೆಲ್ಲ ವಸ್ತ್ರಾಲಂಕಾರಗಳಿಂದ ಮುಚ್ಚಿರುವಂತೆ ತೋರುತ್ತಿದ್ದಿತು. ದಕ್ಷಪುರಿಯ ಈ ಬಗೆಯ ಆನಂದಾತಿಶಯಕ್ಕೆ ಕಾರಣವೇನು?

ಕಾರಣವಿದ್ದಿತು. ಅರಸನ ಸುಖವೇ ಪ್ರಜೆಗಳ ಸುಖ. ರಾಜನಿಗೆ ಆನಂದವಾದರೆ ಪ್ರಜೆಗಳಿಗೆ ಆನಂದವಾಗುವುದು. ಆದುದರಿಂದ ದಕ್ಷಪುರಿಯ ಪ್ರಜೆಗಳೆಲ್ಲರೂ ತಮ್ಮ ಅರಸನ ಆನಂದದೊಡನೆ ಸಮಭಾವವನ್ನು ತಳೆದಿದ್ದರು. ಪ್ರಜಾಪತಿ ದಕ್ಷಬ್ರಹ್ಮನು ಈ ದಿನ ಆನಂದಸಾಗರಲ್ಲಿ ಓಲಾಡುತ್ತಿದ್ದನು. ಆದುದರಿಂದಲೇ ಆತನ ಪ್ರಜೆಗಳೆಲ್ಲರೂ ಸಂತೋಷಾತಿಶಯದಿಂದ ಈ ರೀತಿ ಹಬ್ಬವನ್ನು ಆರಂಭಿಸಿದ್ದರು. ಈ ರೀತಿ ದಕ್ಷರಾಜನ ಪಟ್ಟದರಸಿಯು ಇಂದು ಒಂದು ಅಮೌಲ್ಯವಾದ ಕನ್ಯಾರತ್ನವನ್ನು ಹಡೆದಿದ್ದಳು. ಅದಕ್ಕಾಗಿಯೇ ಆತನಿಗೂ ಆತನ ಪ್ರಜೆಗಳಿಗೂ ಇಷ್ಟೊಂದು ಆನಂದ. ದುರ್ದೈವಿಗಳಾದ ನಾವು ಕನ್ಯೆ ಹುಟ್ಟಿದಳೆಂಬುದನ್ನು ಕೇಳಿ ಕರುಳಿಗೆ ಬರೆಯೆಳೆದುಕೊಳ್ಳುವೆವು. ಸುದೈವದಿಂದ ದಕ್ಷಬ್ರಹ್ಮನು ನಮ್ಮಂತೆ ದರಿದ್ರನಾಗಿರಲಿಲ್ಲ. ನಮ್ಮ ಸಮಾಜದಂತೆ ಆಗಿನ ಸಮಾಜವೂ ಇರಲಿಲ್ಲ. ಉಭಯಕುಲ ಪವಿತ್ರಕಾರಿಣಿಯೆಂಬ ಹೆಸರು ಆಗಿನ ಕಾಲದಲ್ಲಿ, ಆಗಿನ ಸಮಾಜದಲ್ಲಿ, ಕನ್ನಾರತ್ನಕ್ಕೆ ಅನ್ವರ್ಥಕವಾಗಿದ್ದಿತು. ದಕ್ಷರಾಜನಿಗೆ ಈಕೆ ಇಪ್ಪತ್ತೆಂಟನೆಯ ಮಗಳು! ಆದರೂ ಆತನಿಗೆ ಆನಂದವೇ!

ಪ್ರತ್ಯಕ್ಷ ಶ್ರೀದೇವಿ ಭೂದೇವಿಯರ ಅವತಾರವೆನಿಸುವ ನವಜಾತ ಕನ್ನಾರತ್ನವನ್ನು ನೋಡಿ ದಕ್ಷಬ್ರಹ್ಮನೂ ಆತನ ಪತ್ನಿಯೂ ಅಂತರಂಗದಲ್ಲಿ ಅಮಿತಾನಂದವನ್ನು ಅನುಭವಿಸಿದರು. ಇಂತಹ ಸರ್ವ ಸುಲಕ್ಷಣಸಂಪನ್ನೆಯಾದ ಕನ್ನೆಯನ್ನು ಅವರು ಇನ್ನೆಲ್ಲಿಯೂ ನೋಡಿರಲಿಲ್ಲ. ಎಷ್ಟು ಸುಂದರ ಸುಕುಮಾರವಾದ ಅಂಗೋಪಾಂಗಗಳೋ ಅಷ್ಟೇ ಸುಂದರ ಸುಯೋಗ್ಯವಾದ ಅವಯವ ಸನ್ನಿವೇಶ. ಇವೆಲ್ಲಕ್ಕೂ ಹೆಚ್ಚಿನದಾದ ಮೃಣ್ಮಯ ಮೂರ್ತಿಯ ಜೀವಕಳೆಯಂತಿರುವ ಅವಳ ಉಜ್ವಲವಾದ ಮುಖಶ್ರೀಯು ಪ್ರೇಕ್ಷಕರ ಹೃದಯವನ್ನು ಆಕರ್ಷಿಸಿ ಆನಂದಪರವಶತೆಯನ್ನುಂಟುಮಾಡುವುದು. ಕನ್ಯೆಯ ಶರೀರಕಾಂತಿಯಿಂದ ಪ್ರೇಕ್ಷಕರು ತಮ್ಮ ದೃಷ್ಟಿಯನ್ನು ಹಿಂದಕ್ಕೆ ಸೆಳೆಯಲಾರರು. ಅವರಿಗೆ ನೋಡುವ ಇಚ್ಛೆ ಕ್ಷಣಕ್ಷಣಕ್ಕೂ ಹೆಚ್ಚುತ್ತಹೋಗುವುದಲ್ಲದೆ ಕಡಿಮೆಯಾಗದು; ಮನಸ್ಸಿಗೆ ತೃಪ್ತಿಯುಂಟಾಗದು. ದಕ್ಷಬ್ರಹ್ಮನು ಮಗಳನ್ನು ನೋಡಿ ಆನಂದಪರವಶನಾಗಿದ್ದನು.

ದಕ್ಷಬ್ರಹ್ಮನಿಗೆ ತನ್ನ ಮೊದಲಿನ ಇಪ್ಪತ್ತೇಳುಜನ ಹೆಣ್ಣುಮಕ್ಕಳಲ್ಲಿ

ಯಾರ ವಿಷಯವಾಗಿಯೂ ಇಷ್ಟು ಮೋಹವುಂಟಾಗಿರಲಿಲ್ಲ; ಅವರಲ್ಲಿ ಯಾರೂ ಆತನನ್ನು ಈ ರೀತಿ ಮಾಯಾಬಂಧನದಲ್ಲಿ ತೊಡಕಿಸಿರಲಿಲ್ಲ. ಅವರೆಲ್ಲರೂ ಈಗ ಚಂದ್ರಲೋಕದಲ್ಲಿ ಇರುತ್ತಿದ್ದರು. ಇಂದಿನವರೆಗೂ ದಕ್ಷಬ್ರಹ್ಮನಿಗೂ ಆತನ ಪತ್ನಿಗೂ ತಮ್ಮ ಆ ಕನ್ಯೆಯರು ಪ್ರತಿಕ್ಷಣವೂ ಸ್ಮರಣೆಗೆ ಬರುತ್ತಿದ್ದರು. ಆದರೆ ಈಗ ದೇವಿಯ ಅವತಾರದಂತಿರುವ ಈ ನವಜಾತ ಶಿಶುವನ್ನು ನೋಡಿದಾಕ್ಷಣ ಅವರಿಗೆ ಪ್ರಪಂಚದ ಮೋಹವೆಲ್ಲ ಇವಳಲ್ಲಿಯೇ ಐಕ್ಯವಾಗಿದ್ದಂತೆ ತೋರುವುದು. ಮೋಹವೆಂಬುದು ಅವರಿಗೆ ಆ ಶಿಶುವಿನ ಹೊರತು ಯಾವ ಕಡೆಯಲ್ಲಿಯೂ ತಿಲಮಾತ್ರವಾದರೂ ಕಂಡುಬರಲಿಲ್ಲ. ಆ ಶಿಶುವನ್ನು ನೋಡಿದ ಮಾತ್ರದಿಂದಲೇ ಸಕಲೇಂದ್ರಿಯಗಳೂ ತೃಪ್ತಿಯನ್ನು ಹೊಂದುತ್ತಿದ್ದುವು. ಹಸಿವಾಗದು, ನೀರಡಿಕೆಯೆನಿಸದು, ಏನನ್ನೂ ನೋಡುವ ಇಚ್ಛೆ ಹುಟ್ಟದು, ಕೇಳುವ ಅಪೇಕ್ಷೆ ತೋರದು, ಸ್ವರ್ಗಸುಖದ ಆಕಾಂಕ್ಷೆ ಕೂಡ ಉದ್ಭವಿಸದು. ಮಗುವನ್ನು ಬಿಟ್ಟು ತೊಲಗಲು ಮನಸ್ಸು ಒಪ್ಪದು. ಇಂತಹ ಮಹಾ-ಮೋಹ-ಸಂಘಟನೆಗೆ ಆ ಮಗುವಿನಲ್ಲಿ ಇಂತಹ ಮಹತ್ವವೇನಿದ್ದಿತೋ ತಿಳಿಯದು.

ಯಥಾಕಾಲದಲ್ಲಿ ದಕ್ಷಬ್ರಹ್ಮನು ಮಗುವಿನ ನಾಮಕರಣದ ಸಮಾರಂಭವನ್ನು ನೆರವೇರಿಸಿದನು. “ **ಸತೀ** ” ಎಂದು ನಾಮಕರಣವಾಯಿತು ದಕ್ಷರಾಜನ ಪುತ್ರಿಯಾದುದರಿಂದ ಅವಳಿಗೆ “ **ದಾಕ್ಷಾಯಿಣಿ** ” ಯೆಂದೂ ಇನ್ನೊಂದು ಹೆಸರಿಟ್ಟಿದ್ದರು. ಈ ಸಮಾರಂಭಕ್ಕೆ ಚಂದ್ರಲೋಕದಿಂದ ಆಕೆಯ ಇಪ್ಪತ್ತೇಳು ಜನ ಭಗಿನಿಯರೂ ಬಂದಿದ್ದರು. ಅವರು ಬಾಲಿಕಾಸತಿಯನ್ನು ನೋಡಿ ಅವಳಲ್ಲಿ ವಿಶೇಷವಾದ ಯಾವುದೋ ಒಂದು ಗುಣವಿರುವುದೆಂಬುದನ್ನು ಕಂಡುಕೊಂಡರು. ತಂದೆತಾಯಿಗಳ ಈಗಿನ ಅಂತರಂಗ ಬಹಿರಂಗಗಳ ವರ್ತನವೂ ಇದಕ್ಕೊಂದು ಬಲವತ್ತರ ಸಾಕ್ಷಿಯಾಗಿದ್ದಿತು.

ಅತ್ತೆಯ ಮನೆಯಿಂದ ಬಂದ ಹೆಣ್ಣುಮಕ್ಕಳ ಕ್ಷೇಮಸಮಾಚಾರಗಳನ್ನು ಅತ್ಯಾದರದಿಂದ ಕೇಳಿಕೊಂಡು ಅವರ ಸುಖದಲ್ಲಿ ಸುಖಾನುಭವವನ್ನೂ ದುಃಖದಲ್ಲಿ ದುಃಖಾನುಭವವನ್ನೂ ಪಡೆದು ಅವರಿಗೆ ತಕ್ಕ ಸುಖ ಸಮಾಧಾನಗಳನ್ನು ತೋರಿಸುವುದು ತಾಯಂದಿರ ಕರ್ತವ್ಯ. ಆ ಕರ್ತವ್ಯಾನುಗುಣವಾಗಿ ದಕ್ಷರಾಜನ ಪತ್ನಿಯೂ ತನ್ನ ಮಕ್ಕಳ ಸುಖದುಃಖಗಳನ್ನು ಕೇಳಿ ತಿಳಿದು

ಕೊಳ್ಳುತ್ತಿದ್ದಳು. ಆದರೆ ಈ ಸಲ ಅವಳು ಸತಿಯ ಲಾಲನಪಾಲನಗಳಲ್ಲಿಯೇ ಅಸಕ್ತಳಾಗಿದ್ದುಬಿಟ್ಟುದರಿಂದ ಆ ಕಡೆಗೆ ಅವಳ ಲಕ್ಷ್ಯವು ಸಾಕಾದಷ್ಟು ಹೋಗಲಿಲ್ಲ. ಇದರಿಂದ ಅವರಿಗೆ ತಾಯಿಯ ಮನೆಯು ಸ್ವಲ್ಪ ಬೇಸರವಾಗಿ ತೋರಿದರೂ ಸತಿಯ ಅತುಲವೂ ಅಪ್ರತಿಮವೂ ಆದ ಮೋಹದಿಂದ ಅವರು ತಮ್ಮ ಸಕಲ ಮನೋವಿಕಾರಗಳನ್ನೂ ಹತ್ತಿಕ್ಕಿಕೊಂಡು ಸತಿಯ ಪ್ರೀತಿಯಿಂದಲೇ ಆನಂದಪಡುತ್ತಿದ್ದರು. ಒಬ್ಬೊಬ್ಬರೂ ಬಂದು ಬಂದು ಸತಿಯನ್ನು ಎತ್ತಿಕೊಳ್ಳುವರು; ಚಂದ್ರಬಿಂಬ ಸದೃಶವಾದ ಮುಖವನ್ನು ಚುಂಬಿಸಿ ಚುಂಬಿಸಿ ಆನಂದಬಡುವರು; ತಮ್ಮ ತಮ್ಮ ಕೊರಳೊಳಗಿನ ಹಾರಗಳನ್ನು ಹಾಕಿ ಅಲಂಕಾರಗಳನ್ನಿಟ್ಟು, ನೋಡಿ ನೋಡಿ, ಮುದ್ದಿಟ್ಟು ಮುದ್ದಿಟ್ಟು ಸಂತೋಷಬಡುವರು. ಒಂದೆರಡು ದಿನಗಳ ತರುವಾಯ ಅವರು ತಮ್ಮ ತಮ್ಮ ಮನೆಗಳಿಗೆ ತಿರುಗಿಹೋದರು. ಹೋಗುವಾಗ ಸತಿಯ ಅಂಗ ಸೌಷ್ಠವ, ಮುಖಕಾಂತಿ, ಇವುಗಳನ್ನು ನೆನೆನೆನೆದು ಆನಂದಪರವಶರಾಗುವರು; ಅಂತರಂಗದಲ್ಲಿ ಸ್ವಲ್ಪ ಈರ್ಷೆಯೂ ಜನಿಸುವುದು. ಸತಿಯು ತಂದೆ ತಾಯಿಗಳ ಪ್ರೇಮವನ್ನು ಅಖಂಡವಾಗಿ ಎಲ್ಲಿ ಸೆಳೆದುಕೊಂಡು ಬಿಡುವಳೋ ಎಂಬ ಸಂಶಯವೂ ಅದರಿಂದುಂಟಾಗುವ ಮತ್ಸರವೂ ಕೊನೆಗೆ ದುಃಖರೂಪವಾಗಿ ಪರಿಣಮಿಸಿ ಅವರ ಮನಸ್ಸನ್ನು ಕಳವಳಪಡಿಸುತ್ತಿದ್ದಿತು. ಹೆಣ್ಣು ಮಕ್ಕಳಿಗೆ ಅತ್ತೆಯ ಮನೆಯಲ್ಲಿ ಎದೆಯಲ್ಲಿ ಖಡ್ಗವನ್ನು ನೆಟ್ಟರೂ ಆಗ ದಂತಹ ದುಃಖವು ತಾಯಿಯ ಮನೆಯಲ್ಲಿ ತಾಯಿತಂದೆಗಳು ಸಹಜವಾಗಿ ಆಡಿದ ಒಂದು ಚಿಕ್ಕ ಅನಾದರದ ಮಾತಿನಿಂದ ಆಗುವುದು. ಅಂತೂ ಸತಿಯ ಜನನದಿಂದ ಅವಳ ಅಕ್ಕಂದಿರಿಗೆ ಒಂದು ಬಗೆಯ ಮತ್ಸರ ಒಂದು ಬಗೆಯ ಅಭಿಮಾನ ಇವೆರಡೂ ಹುಟ್ಟಿದುವು. ಸ್ವಾರ್ಥಪರವಾದ ಮತ್ಸರವು ಸ್ವಜನ ಸಂಬಂಧವಾದ ಅಭಿಮಾನದೊಡನೆ ಕೂಡಿದಾಗ ಕ್ಷುದ್ರ ವ್ಯಕ್ತಿಗಳಲ್ಲಿ ಮತ್ಸರವು ಬೆಳೆಯುವುದು; ಶ್ರೇಷ್ಠ ವ್ಯಕ್ತಿಗಳಲ್ಲಿ ಅಭಿಮಾನವು ಹೆಚ್ಚುವುದು. ದಕ್ಷರಾಜನ ಕನ್ಯೆಯರೆಲ್ಲರೂ ಮುಂದೆ ಅಲ್ಪಾವಕಾಶದಲ್ಲಿಯೇ ತಮ್ಮ ಸ್ವಾರ್ಥಪರವಾದ ಮತ್ಸರವನ್ನು ತೊರೆದು ತಮ್ಮ ತಂಗಿಯ ಅಲೌಕಿಕತೆಯಿಂದ ಅಭಿಮಾನ ತಾಳಿ ಆನಂದವನ್ನು ಪಡೆದರು.



## ಎರಡನೆಯ ಪರಿಚ್ಛೇದ

# ಬಾಲ್ಯ



ಮುಂದೆ ಕೆಲವು ದಿನಗಳು ಕಳೆದಬಳಿಕ ದಕ್ಷರಾಜನ ತಮ್ಮಂದಿರಾದ ನಾರದರು ದಕ್ಷಪುರಿಗೆ ಬಂದರು. ಅರಸನು ರಾಜಸಭೆಯಲ್ಲಿರಲಿಲ್ಲ; ಅಂತಃಪುರದಲ್ಲಿ ಬಾಲಿಕಾಸತಿಯೊಡನೆ ಬಾಲಕ್ರೀಡೆಗಳನ್ನಾಡುತ್ತ ಕುಳಿತಿದ್ದನು. ನಾರದರೂ ನೆಟ್ಟಗೆ ಅಂತಃಪುರಕ್ಕೇ ಹೋದರು. ಅಲ್ಲಿ ಸತಿಯನ್ನು ನೋಡಿದೊಡನೆಯೇ ಆನಂದಾಶ್ರುವಿನಿಂದ ಅವರ ಕಣ್ಣುಗಳು ತುಂಬಿಬಂದುವು; ಆನಂದಪರವಶತೆಯಿಂದ "ಅಮ್ಮಾ!" ಎಂಬ ಪ್ರೇಮೋದ್ಗಾರವು ತಟ್ಟನೆ ಹೊರಸೂಸಿತು. ಅವಳನ್ನು ಎತ್ತಿಕೊಳ್ಳಲು ಕೈಗಳು ಆತುರಗೊಂಡುವು; ಮುದ್ದಿಡಲು ಮುಖವು ಮುಂದೆ ಬಂದಿತು. ನಾರದರು ತಟ್ಟನೆ ಹೋಗಿ ಸತಿಯನ್ನು ಎತ್ತಿ ಮುದ್ದಾಡಿದರು. "ಜಯ! ಭವಾನಿ! ಜಗದಂಬೆ! ಆದ್ಯಶಕ್ತಿ!" ಎನ್ನುತ್ತ ಪುನಃಪುನಃ ಮುದ್ದಿಟ್ಟುಕೊಂಡರು. ಅದನ್ನು ನೋಡಿ ದಕ್ಷರಾಜನಿಗೂ ಆತನ ಪತ್ನಿಗೂ ಆಶ್ಚರ್ಯವಾಯಿತು. ನಾರದರ ಹೇಳಿಕೆಯಿಂದ ಸತಿಯು ಆದ್ಯಶಕ್ತಿಯ ಅವತಾರವೆಂದು ಅವರು ನಂಬಿದರು. ನಾರದರು ಸತಿಯನ್ನು ಎತ್ತಿ ದಕ್ಷರಾಜನ ಕೈಗೆ ಕೊಟ್ಟಕೂಡಲೆ ಪುನಃ ಮಾಯಾವೃತವಾದ ಅವರ ಮನಸ್ಸಿಗೆ ಅವಳೊಬ್ಬ ಸಾಮಾನ್ಯ ರಾಜಪುತ್ರಿಯೆಂದು ತೋರಿತು. ನಾರದರ ಕಿವಿಗೆ ಮುಟ್ಟಿದ ಮಾತು ಮೂರು ಲೋಕಕ್ಕೂ ಮುಟ್ಟುವುದು ಸಹಜವೇ ಸರಿ. ದಕ್ಷರಾಜನ ಮನೆಯಲ್ಲಿ **"ಆದ್ಯಶಕ್ತಿಯು"** ಸತಿಯ ರೂಪದಿಂದ ಅವತರಿಸಿರುವಳೆಂಬ ಸುದ್ದಿ ಕೆಲವು ದಿನಗಳಲ್ಲಿಯೇ ಸಕಲಲೋಕಗಳಲ್ಲಿಯೂ ಹಬ್ಬಿತು.

ತಂದೆತಾಯಿಗಳ ಅವಿಚಲಪ್ರೇಮಪೂರ್ಣವಾದ ಲಾಲನಪಾಲನಗಳಿಂದ ಸತಿಯು ದಿನದಿನಕ್ಕೆ ದೊಡ್ಡವಳಾಗುತ್ತ ನಡೆದಳು. ಮೆಲ್ಲಗೆ ತೊದಲ್ನುಡಿಗಳನ್ನು ಕಲಿತಳು; ಅಂಬೆಗಾಲಿಡತೊಡಗಿದಳು; ಅವಳು ಶಂಕರಕೀರ್ತನವನ್ನು

ತಂದೆತಾಯಿಗಳು ಹೇಳಿಕೊಟ್ಟಂತೆ ಸ್ಪಷ್ಟವಾಗಿ ನುಡಿಯಲು ಸಮರ್ಥೆ ಳಾದಳು. ಕಾಲು ಬಲಿಯಿತು; ನೆರೆಹೊರೆಯ ಮಕ್ಕಳ ಸಂಗಡ ಅಂಗಣಕ್ಕೆ ಹೋಗಿ ಆಡತೊಡಗಿದಳು. ದಕ್ಷರಾಜನಿಗೂ ಆತನ ಪತ್ನಿಗೂ ಮಗಳು ಅರೆಗಳಿಗೆ ಕಣ್ಮರೆಯಾದರೂ ಸೈರಿಸದು; ಸತಿಯು ಕಣ್ಮರೆಯಾದರೆ ಜಗತ್ತೇ ಮರೆಯಾದಂತಾಗುವುದು. ದಕ್ಷರಾಜನಿಗೆ ರಾಜ್ಯಕಾರ್ಯಭಾರದಲ್ಲಿ ಮೊದಲಿ ನಂತೆ ಆಸಕ್ತಿಯಿಲ್ಲ. ಎಲ್ಲವನ್ನೂ ಮುಖ್ಯ ಮಂತ್ರಿಗೆ ಒಪ್ಪಿಸಿ ಬಿಟ್ಟಿದ್ದನು. ಅಂತಹ ಮಹತ್ಕಾರ್ಯವೇನಾದರೂ ಇದ್ದರೆ ಮಾತ್ರ ಸತಿಯನ್ನು ಎತ್ತಿ ಕೊಂಡೇ ರಾಜಸಿಂಹಾಸನದ ಮೇಲೆ ಹೋಗಿ ಕುಳ್ಳಿರುವನು. ಸತಿಯು ತಾಯಿಗೂ ಅಷ್ಟೇ ಪ್ರೇಮಪಾತ್ರಳಾಗಿದ್ದಳು. ಮಗಳಿಗೆ ಎಷ್ಟು ಎಣ್ಣೆ ಯನ್ನು ಹೂಸಿದರೂ ಕಡಿಮೆಯೆನಿಸುವುದು; ಎಷ್ಟು ಎರೆದರೂ ಸಾಲದೆನಿಸು ವುದು; ಎಷ್ಟು ಹಾಲುಣಿಸಿದರೂ ಮಗಳ ಹಸಿವು ತಣಿದಂತೆಯೇ ತೋರದು. ಒಟ್ಟಿಗೆ ಮಗಳಿಗೆ ಮಾಡಿದ ಪ್ರೀತಿ ಲಾಲನಪಾಲನಗಳಿಂದ ತಾಯಿಗೆ ತೃಪ್ತಿ ಯಾಗದು; ಅದಕ್ಕೆ ಮಗಳ ಮೇಲಿನ ಅವಳ ಅಂತರಂಗದೊಳಗಿನ ಅಪಾರ ವಾದ ವಾತ್ಸಲ್ಯವೇ ಕಾರಣವಾಗಿದ್ದಿತು.

ತಂದೆತಾಯಿಗಳು ಸತಿಯ ವಿಷಯದಲ್ಲಿ ಈ ರೀತಿ ವಾತ್ಸಲ್ಯವನ್ನು ತೋರಿಸುತ್ತಿದ್ದರು, ಇಷ್ಟೇ ಅಲ್ಲ; ಅವಳ ಮುಂದಿನ ಆಯುಷ್ಯಮಂದಿರಕ್ಕೆ ತಕ್ಕ ಅಸ್ತಿವಾರವನ್ನು ಅವರು ಈ ಬಾಲ್ಯದಲ್ಲಿಯೇ ಹಾಕಿಟ್ಟರು. ಪ್ರತಿ ದಿನವೂ ಪ್ರಾತಃಕಾಲದಲ್ಲಿ ಎದ್ದು ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಒಂದರ್ಧತಾಸು ಈಶ್ವರಚಿಂತೆನವನ್ನು ಭಕ್ತಿಯಿಂದ ಮಾಡಿ ಸುವರು. ಆ ಮೇಲೆ ತಕ್ಕ ಆಹಾರವನ್ನು ಕೊಟ್ಟು ಆಡಲಿಕ್ಕೆ ಬಿಡುವರು. ಮಧ್ಯಾಹ್ನವಾದ ಕೂಡಲೆ ದಾಸಿಯರು ಕರೆತಂದೊಡನೆಯೇ ಸತಿಯ ಮೈದೊಳೆದು ಮಜ್ಜನಂಗೈಸಿ ಪುನಃ ಸ್ವಲ್ಪ ಕಾಲ ಈಶ್ವರಚಿಂತನವನ್ನು ಮಾಡಿಸುವರು. ಮಧ್ಯಾಹ್ನದ ಊಟವಾದ ಬಳಿಕ ಪುರಾಣಶ್ರವಣವಾಗು ವುದು. ಸಾಯಂಕಾಲದ ವೇಳೆಗೆ ಸತಿಯು ಪುನಃ ದಾಸಿಯರೊಡನೆ ಓರ ಗೆಯ ಗೆಳತಿಯರ ಸಂಗಡ ಆಟವಾಡಲು ಹೋಗುವಳು; ತಿರುಗಿ ಬಂದಮೇಲೆ ಪ್ರದೋಷಕಾಲದಲ್ಲಿ ಪುನಃ ಈಶ್ವರಾರಾಧನೆಯಾದ ಬಳಿಕ ಊಟಮಾಡಿ ಹಂಸತೂಲಿಕಾತಲ್ಪದಲ್ಲಿ ತಾಯಿಯ ಮಗ್ಗುಲಲ್ಲಿ ಮಲಗುವಳು.

ಸತಿಯ ಬುದ್ಧಿ ಬಹು ಕುಶಾಗ್ರವಾಗಿದ್ದಿತು. ಬೆಳೆಯು ಸಿರಿ ಎಳೆಯು ಲಿಯೇ ಕಂಡುಬರುವುದೆಂಬ ಮಾತು ಸತಿಯ ತಂದೆತಾಯಿಗಳಿಗೆ ಪ್ರತ್ಯಕ್ಷ ಅನುಭವಕ್ಕೆ ಬಂದಿತು. ಸತಿಗೆ ಒಂದೊಂದು ಮಾತಿನ ವಿಷಯವಾಗಿಯೂ ತರ್ಕ ಬಹಳ. ಯಾವುದನ್ನು ಕಂಡರೂ ಇದು ಹೀಗೇಕೆಂದು ತಟ್ಟನೆ ಕೇಳಿ ಬಿಡುವಳು. ಹೇಳದಿದ್ದರೆ ಅವಳ ಮನಸ್ಸಿಗೆ ಸಮಾಧಾನವಿಲ್ಲ. ಎಲ್ಲ ಹುಡು ಗರ ಹಾಗೆ ಏನಾದರೊಂದು ಅಡ್ಡ ತಿಡ್ಡ ಸಮಾಧಾನವನ್ನು ಹೇಳಹೋದರೆ ಸತಿಗೆ ಎಂದೆಂದೂ ಒಪ್ಪಿಗೆಯಾಗದು. ಒಂದು ದಿನ ದೇವರೆಲ್ಲಿದ್ದಾನೆಂದು ಕೇಳುವಳು, ಮತ್ತೊಂದುದಿನ ವ್ರತೋಪವಾಸಗಳಿಂದ ಫಲವೇನೆಂದು ಕೇಳು ವಳು; ಇನ್ನೊಂದುದಿನ ಹಿಂದಿನ ಜನ್ಮದಲ್ಲಿ ತಾನು ಯಾರಾಗಿದ್ದೆನೆಂದು ಕೇಳುವಳು. ಐದು ವರುಷದ ಹಸುಗೂಸಿಗೆ ಈ ಮಾತುಗಳನ್ನೆಲ್ಲಾ ತಿಳಿಸಿ ಹೇಳುವುದೆಂತು? ದಕ್ಷರಾಜನೂ ರಾಣಿಯೂ ಬಲು ಪೇಚಾಡುವರು. ಅವರು ಉತ್ತರ ಹೇಳಹೋದರೆ ತನ್ನ ಮನಸ್ಸಿಗೆ ಸಮಾಧಾನವಾಗುವವರೆಗೂ ಸತಿಯ ಪ್ರಶ್ನಮಾಲಿಕೆ ಕೊನೆಮುಟ್ಟದು. ಸತಿಯದು ಇನ್ನೊಂದು ವಿಶೇಷ ಗುಣ; ಅವಳು ಬಹು ಅಭಿಮಾನಿ. ತನ್ನ ಮನಸ್ಸಿಗೆ ವಿರುದ್ಧವಾಗಿ ತಂದೆತಾಯಿಗಳೇ ಆಗಲಿ, ಇನ್ನಾರೇ ಆಗಲಿ, ಒಂದು ಶಬ್ದವನ್ನು ಆಡಿದರೂ ಅವಳಿಗೆ ಸಹನವಾಗದು. ಅಭಿಮಾನಕ್ಕೆ ಎಳ್ಳಷ್ಟು ಭಂಗಬಂದರೂ ತಟ್ಟನೆ ಅವಳ ಕಣ್ಣಲ್ಲಿ ನೀರೇ ಬರುವುದು. ಸತಿಯು ರಾತ್ರಿಯಲ್ಲಿ ತಾಯಿಯ ಮಗ್ಗುಲಲ್ಲಿ ಮಲಗಿದಾಗ ಅವಳು ತನಗೆ ಕಥೆಯನ್ನು ಹೇಳಬೇಕೆಂದು ಕೇಳುವಳು. ಅಂತಿಂತಹ ಕಾಗೆಗುಬ್ಬಿಗಳ ಕಥೆಯನ್ನು ಹೇಳಿದರೆ ನಡೆ ಯದು. ಪುರಾಣ ಪುಣ್ಯ ಕಥೆಗಳ ಮೇಲೆ ಅವಳಿಗೆ ಬಹು ಪ್ರೀತಿ ಮಧ್ಯ ರಾತ್ರಿ ಮೀರಿದರೂ ಸತಿಗೆ ಕಥೆಯನ್ನು ಕೇಳುವ ಆತುರತೆ ಕಡಿಮೆಯಾಗದು. ಕಡೆಗೆ ತಾಯಿಯು ದಣಿದು ಮಲಗಿದಳೆಂದರೆ ನಿರುಪಾಯಗಳಾಗಿ ತಾನೂ ಮಲಗುವಳು. ಸತಿಯ ಸ್ಮರಣಶಕ್ತಿ ವಿಲಕ್ಷಣವಾಗಿದ್ದಿತು. ಅವಳಿಗೆ ಇಂದು ಹೇಳಿದ ಒಂದು ಮಾತು ಮುಂದೆ ಮೂರು ವರುಷಗಳ ಮೇಲೆಯೂ ಹಾಗೆಯೇ ನೆನಪುಳಿಯುವುದು. ತಾಯಿಯು ಒಮ್ಮೆ ಹೇಳಿದ ಕಥೆಯನ್ನು ಸತಿಯು ಕೊನೆಯವರೆಗೂ ಸರಿಯಾಗಿ ನೆನಪಿಟ್ಟುಕೊಳ್ಳುವಳು.

ಸತಿಯಲ್ಲಿ ಮತ್ತೊಂದು ವಿಶೇಷಗುಣವಿದ್ದಿತು. ಅವಳು ತಂದೆತಾಯಿ

ಗಳ ಮಾತನ್ನು ಎಂದೆಂದೂ ಮೀರಿಸಡೆಯಳು. ಅವರು ಒಮ್ಮೆ ಉಪದೇಶಿಸಿದ ನೀತಿಯ ಮಾತನ್ನು ತಾನು ಮರೆಯಳು, ಇಷ್ಟೇ ಅಲ್ಲ; ತಂದೆತಾಯಿಗಳು ಮೋಹದಿಂದ ಮರೆತರೆ ತಿರುಗಿ ಅವರಿಗೇ ಅದನ್ನು ನೆನಪು ಮಾಡುವಳು. ಆದರೆ ಒಂದು ಮಾತಿನಲ್ಲಿ ಮಾತ್ರ ಅವಳು ಯಾರನ್ನೂ ಕೇಳಳು; ದೀನದರಿದ್ರರನ್ನು ಕಂಡರೆ ಅವಳ ಕಣ್ಣುಗಳಿಂದ ನೀರು ಸುರಿಯುವುದು. ತಂದೆತಾಯಿಗಳು ಪ್ರೇಮದಿಂದ ತೊಡಿಸಿದ ಅಲಂಕಾರಗಳನ್ನು ಅವರಿಗೆ ದಾನಮಾಡಿಬಿಡುವಳು. ಪ್ರಾಪಂಚಿಕರಾದ ದಕ್ಷಬ್ರಹ್ಮನಿಗೂ ಆತನ ಪತ್ನಿಗೂ ಮಗಳು ವಸ್ತ್ರಾಲಂಕಾರಗಳ ಮೇಲೆ ತೋರಿಸುವ ಅಪ್ರೀತಿಯಿಂದ ಸ್ವಲ್ಪ ಬೇಸರವಾಗುವುದು. ಆದರೆ ಆ ಬೇಸರವು ಸತಿಯು ದೃಷ್ಟಿಯ ಮರೆಯಲ್ಲಿರುವಾಗ ಮಾತ್ರ; ಅವಳು ಕಣ್ಣೆದುರಿಗೆ ಬಂದು ನಿಂತೊಡನೆಯೇ ಅವರ ಮನಸ್ಸಿನ ಸ್ಥಿತಿ ತಟ್ಟನೆ ಬದಲಾಗಿ ಹೋಗುವುದು. ಕೇವಲ ಆನಂದ, ಆನಂದವೊಂದೇ ಅಲ್ಲದೆ ಇನ್ನಾವಭಾವನೆಯೂ ಸತಿಯ ಮುಖಾವಲೋಕನದಿಂದ ಅವರ ಹೃದಯದಲ್ಲಿ ಹುಟ್ಟದು.

ಕ್ರಮಕ್ರಮವಾಗಿ ಸತಿ ದೊಡ್ಡವಳಾಗುತ್ತ ನಡೆದಳು. ತಂದೆತಾಯಿಗಳ ಮನೋವೃತ್ತಿಯೂ ಅದರೊಡನೆ ಬದಲಾಗುತ್ತ ಬಂದಿತು. ಮೊದಲು ಅವರಿಗೆ ಸತಿಯನ್ನು ನೋಡಿದರೆ ಆನಂದವಷ್ಟೇ ಆಗುತ್ತಿದ್ದಿತು. ಈಗ ಆ ಆನಂದಭಾವನೆ ಕ್ರಮವಾಗಿ ಭಕ್ತಿಭಾವನೆಯ ಸ್ವರೂಪಕ್ಕೆ ಬರತೊಡಗಿತು. ದಕ್ಷರಾಜನು ಮಗಳಿಗೆ ಸತೀಪದಕ್ಕೆ ತಕ್ಕ ಶಿಕ್ಷಣವನ್ನು ಕೊಡಲು ಆರಂಭಿಸಿದನು, ಓದುಬರೆಹಗಳನ್ನು ತಾನೇ ಕಲಿಸಿದನು. ಕಲಿಸುವಾಗ ದಕ್ಷನಿಗೆ ಅವಳ ಅಪ್ರತಿಮವಾದ ಜಾಣ್ಮೆಯನ್ನು ನೋಡಿ ಅತ್ಯಾನಂದವಾಗುವುದು. ದಕ್ಷರಾಜನು ಒಮ್ಮೆ ಪುರಾಣವನ್ನು ಓದಿತೋರಿಸುವನು; ಒಮ್ಮೆ ಅದಕ್ಕೆ ವ್ಯಾಖ್ಯಾನಗಳನ್ನು ಹೇಳುವನು. ಆ ವ್ಯಾಖ್ಯಾನಗಳನ್ನು ಮೊದಮೊದಲು ಸತಿಯು ಸುಮ್ಮನೆ ಕುಳಿತು ಕೇಳುತ್ತಿದ್ದಳು. ಬರಬರುತ್ತ ಆ ಸ್ಥಿತಿ ಉಳಿಯಲಿಲ್ಲ. ತಂದೆಯ ವ್ಯಾಖ್ಯಾನಕ್ಕೆ ಮಗಳು ಪ್ರತ್ಯಾಖ್ಯಾನವನ್ನು ಮಾಡುವಳು. ತಂದೆಯು ಒಂದು ಶ್ಲೋಕಕ್ಕೆ ಒಂದರ್ಥವನ್ನು ಹೇಳಿದರೆ ಮಗಳು ಮತ್ತೊಂದರ್ಥವನ್ನು ಸೂಚಿಸುವಳು. ಇದನ್ನು ನೋಡಿ ದಕ್ಷರಾಜನಿಗೆ ಆಶ್ಚರ್ಯವಾಗುವುದು.

ಭಿಕ್ಷುಕರಿಗೆ ದಾನಮಾಡುವುದರಿಂದಲೂ ಕಂಗಾಲರಿಗೆ ಅನ್ನವಸ್ತ್ರಗಳನ್ನು ಕೊಡುವುದರಿಂದಲೂ ಸತಿಗೆ ಬಹು ಆನಂದವಾಗುವುದು. ಸಾಧು ಸಂನ್ಯಾಸಿಗಳನ್ನು ಕಂಡರೆ ಅವಳ ಆನಂದಕ್ಕೆ ಮೇರೆಯುಳಿಯದು. ಅವಳು ಎಷ್ಟು ವಿನಯದಿಂದಲೂ ಪ್ರೀತಿಯಿಂದಲೂ ಅವರ ಸೇವಾಶುಶ್ರೂಷೆಗಳನ್ನು ಮಾಡುವಳೋ ಎಷ್ಟು ಆದರಪ್ರೀತಿಗಳಿಂದ ಅವರ ಊಟಉಣಿಸುಗಳನ್ನು ಅನುಗೊಳಿಸುವಳೋ ಅಷ್ಟೇ ಸಂತೋಷದಿಂದ ಅವರು ಹೇಳುವ ಭಗವಂತನ ನಾಮಸಂಕೀರ್ತನ ಗುಣಗಾನಗಳನ್ನು ಕೇಳುವಳು. ಸಂನ್ಯಾಸಿಗಳಿಗೆ ಹೊತ್ತು ಹೊತ್ತಿಗೆ ಅನ್ನಪಾನಗಳೂ ಅರಿವೆ ಅಂಚಡಿಗಳೂ ದೊರೆಯುವುದಿಲ್ಲವೆಂಬುದನ್ನು ಕೇಳಿ ಸತಿಯ ಮನಸ್ಸಿನಲ್ಲಿ ಕಳವಳವುಂಟಾಗುವುದು. ಸತಿಯು ಸಾಧುಸಂನ್ಯಾಸಿಗಳಿಗೆ ಸಂಸಾರವನ್ನು ಬಿಡುವುದರಲ್ಲಿ ಏನೂಅರ್ಥವಿಲ್ಲೆಂತಲೂ ಸಂಸಾರದಲ್ಲಿಯೇ ಇದ್ದುಕೊಂಡು ಈಶ್ವರನಾಮಸಂಕೀರ್ತವನ್ನು ಮಾಡಿ ಆತನಿಗೆ ಪ್ರೀತಿಯಾದ ಸದ್ಧರ್ಮವರ್ತನ, ಪರೋಪಕಾರ, ಸ್ವಕರ್ತವ್ಯತತ್ಪರತೆ ಮುಂತಾದ ಗುಣಗಳನ್ನು ಅನುಕರಿಸಿ ನಡೆದು ಮೋಕ್ಷವನ್ನು ಪಡೆಯಬೇಕೆಂತಲೂ ಉಪದೇಶಿಸುವಳು. ಸತಿಯ ಉಪದೇಶವನ್ನು ಕೇಳಿ ಅವರಿಗೂ ಆಶ್ಚರ್ಯವಾಗುವುದು; ಆನಂದವಾಗುವುದು. ಆದುದರಿಂದಲೇ ಸತಿಯಿರುವ ದಕ್ಷಪುರಿಯನ್ನು ಬಿಟ್ಟು ಹೋಗುವುದೆಂದರೆ ಅವರಿಗೆ ಈಶ್ವರ ಸಾನ್ನಿಧ್ಯದಿಂದ ತೊಲಗಿ ಹೋಗುವಂತೆ ತೋರುವುದು; ಕಣ್ಣುಗಳಲ್ಲಿ ನೀರು ತುಂಬುವುದು.

ದಕ್ಷರಾಜನೂ ಆತನ ಪತ್ನಿಯೂ ಮಗಳನ್ನು ಲೋಕಕ್ಕೆ ಆದರ್ಶರಮಣಿಯೂ ಅನುಕರಣೀಯಳಾದ ಗೃಹಿಣಿಯೂ ಆಗುವಂತೆ ಮಾಡಲು ಯತ್ನಿಸುತ್ತಿದ್ದರು. ರಮಣಿಯರ ಕರ್ತವ್ಯ, ಗೃಹಿಣಿಯರ ಪತಿಭಕ್ತಿ ಕುಲವಧುಗಳ ಸೇವಾಶುಶ್ರೂಷೆ ಇವುಗಳನ್ನೂ ಅತಿಥಿಅಭ್ಯಾಗತರ ಆದರೋಪಚಾರಗಳನ್ನು ಯಾವ ರೀತಿಯಾಗಿ ಮಾಡಬೇಕೆಂಬುದನ್ನೂ ದಕ್ಷಪತ್ನಿಯು ಮಗಳಿಗೆ ಆಗಾಗ ಉಪದೇಶಿಸುವಳು; ಅಡಿಗಡಿಗೆ ನಡೆದು ತೋರಿಸುವಳು; ಮಗಳಿಂದ ಅದರಂತೆ ಮಾಡಿಸಿಕೊಂಡು ತಪ್ಪುತಡೆಗಳನ್ನು ತಿದ್ದುವಳು.

ಈ ರೀತಿ ತಂದೆತಾಯಿಗಳ ಲಾಲನ ಪಾಲನ ಶಿಕ್ಷಣಗಳೊಡನೆ ಸತಿಯ ಬಾಲ್ಯವು ಕಳೆಯಿತು; ಕಿಶೋರಾವಸ್ಥೆಯಲ್ಲಿ ಅವಳು ಕಾಲಿಟ್ಟಳು. ಆಟಪಾಟಗಳ ಮೇಲಿನ ಅವಳ ಪ್ರೀತಿ ಕಡಿಮೆಯಾಯಿತು. ಬಾಲ್ಯದ ಬಯಲಿನಲ್ಲಿ

ವಿಹರಿಸುವಾಗಿನ ಅವಳ ಚಪಲತೆ ಕುಂದಿ ಆ ಸ್ಥಳದಲ್ಲಿ ಧೀರತೆ ಲಜ್ಜೆಗಳು ಉದ್ಭವಿಸಿದುವು. ಸ್ವಭಾವಸಹಜವಾದ ಲಜ್ಜೆಯು ಕುಲಸ್ತ್ರೀಯರಿಗೆ ನಿಜವಾದ ಸೌಂದರ್ಯದ ಆವರಣದಂತಿರುವುದು. ಇಂದಿನವರೆಗೆ ಸತಿಯನ್ನು ನೋಡಿದಾಗ ಹುಟ್ಟುತ್ತಿದ್ದ ವಾತ್ಸಲ್ಯಭಾವನೆಯು ಈಗ ಭಕ್ತಿರೂಪವಾಗಿ ಪರಿಣಮಿಸಿತು. ಸ್ವಯಂ ದಕ್ಷಪತ್ನಿಗೇ ತಾನು ಸತಿಯ ತಾಯಿಯೋ ಸತಿಯೇ ತನ್ನ ತಾಯಿಯೋ ಎಂಬ ಭಾವನೆ ಒಮ್ಮೊಮ್ಮೆ ಹುಟ್ಟುವುದು. ಎಂದರೆ ತಾನು ಸತಿಯನ್ನು ಹೆಚ್ಚು ಪ್ರೀತಿಸುವೆನೋ ಸತಿಯೇ ತನ್ನನ್ನು ಹೆಚ್ಚು ಮಮತೆಯಿಂದ ನೋಡಿಕೊಳ್ಳುವಳೋ ಎಂಬ ಸಂಶಯವು ಅವಳ ಹೃದಯದಲ್ಲಿ ಉದಯಿಸುವುದು.

ದಕ್ಷರಾಜನೂ ಸತಿಯ ಮಾತೃಸ್ನೇಹವನ್ನು ನೋಡಿ ಆನಂದಪರವಶನಾದನು. ಆತನು ಬ್ರಹ್ಮನ ಮಾನಸಪುತ್ರನು; ಆದುದರಿಂದ ಆತನಿಗೆ ಮಾತೃಸ್ನೇಹದ ಅನುಭವವಿರಲಿಲ್ಲ. ಈಗ ಸತಿಯು ತನ್ನಲ್ಲಿ ತೋರಿಸುವ ಅತುಲವೂ ಅನುಪಮವೂ ಆದ ಮಾತೃಸ್ನೇಹವನ್ನು ನೋಡಿ ಅವನಿಗಾದ ಆನಂದವನ್ನು ಹೇಳಲಾಸಲ್ಲ. ದಕ್ಷರಾಜನು ಮಹಾ ಅಭಿಮಾನಿಯೂ ಉಗ್ರನೂ ಮಹತ್ವಾಕಾಂಕ್ಷಿಯೂ ಆಗಿದ್ದನು. ಆದುದರಿಂದ ಅವನ ಮನಸ್ಸಿನಲ್ಲಿ ಯಾವಾಗಲೂ ಶಾಂತಿಯಿರುತ್ತಿರಲಿಲ್ಲ. ಆದರೆ ಸತಿಯ ಸಹವಾಸದಿಂದ ಅವನು ಈಗ ನಿರಭಿಮಾನಿಯೂ ಕೋಮಲಹೃದಯಿಯೂ ಸದಾತೃಪ್ತನೂ ಆಗಿ ತೋರಿದನು. ಆದರೆ ಹುಟ್ಟುಗುಣವು ಸುಟ್ಟರೂ ಹೋಗದೆಂಬ ಮಾತು ಸುಳ್ಳಲ್ಲ. ಈ ಮಾತಿನ ಅನುಭವವು ಮುಂದೆ ಪ್ರತ್ಯಕ್ಷವಾಗುವುದು.

ಸತಿಯು ತಾಯಿತಂದೆಗಳಿಗೆ ಮಾತ್ರವೇ ಅತುಲ ಮಮತೆಯನ್ನು ತೋರಿಸುತ್ತಿದ್ದಳೆಂತಲ್ಲ. ಅವಳು ಸಕಲರನ್ನೂ ಸಮದೃಷ್ಟಿಯಿಂದ ನೋಡುವಳು. ಜಗನ್ಮಾತೆಯಾದ ಸತಿಗೆ ಜಗತ್ತಿನ ಮೇಲೆಯೇ ಅತುಲವಾದ ಮಮತೆ. ಅರಮನೆಯ ದಾಸದಾಸಿಯರನ್ನೂ ರಾಜನ ಮಂತ್ರಿಪರಿಜನರನ್ನೂ ಸಕಲ ಪ್ರಜೆಗಳನ್ನೂ ಸಮಭಾವದಿಂದ ನೋಡುವಳು. ಯಾರಿಗೆ ಯಾವ ವಿಧದ ಆಪತ್ತು ಒದಗಿದರೂ ಅವರಿಗೆ ಕೈಗೊಟ್ಟು ಉದ್ಧರಿಸುವಳು. ದರಿದ್ರರನ್ನೂ ವ್ಯಂಗರನ್ನೂ ಕಂಡರೆ ಕಣ್ಣೀರು ಸುರಿಸುವಳು. ವ್ಯಾಧಿಗ್ರಸ್ತರಾದವರಿಗೆ ಔಷಧೋಪಚಾರಗಳನ್ನು ತಾನೇ ನಡೆಯಿಸುವಳು. ಪಶುಪಕ್ಷಿ ಕ್ರಿಮಿಕೀಟಕ

ಗಳ ಮೇಲೆಯೂ ಅವಳ ಪ್ರೀತಿ ಕಡಿಮೆಯಾಗಿರಲಿಲ್ಲ. ಅಣು-ರೇಣು-ತೃಣ ಕಾಷ್ಠಗಳನ್ನೂ ಪಶುಪಕ್ಷಿ ಕ್ರಿಮಿಕೀಟಕಗಳನ್ನೂ ಮಾನವ-ದಾನವ-ದೇವತೆಗಳನ್ನೂ ಸಮಭಾವದಿಂದ ನೋಡಿ ಅವರವರಿಗೆ ಅನುರೂಪವಾದ ಸಹಾಯ ಸಂಪತ್ತಿಯನ್ನು ನೀಡುವಳು. ತಾಯೇ! ಜಗದಂಬೇ! ಈ ಕಲಿಕಾಲದಲ್ಲೊಮ್ಮೆ ಅವತರಿಸಬಾರದೇನಮ್ಮಾ!

ಒಮ್ಮೆ ವಸಂತರಾಜನ ಆಗಮನದಿಂದ ಹಿಮಾಲದಲ್ಲಿ ವಿಲಕ್ಷಣಪರಿವರ್ತನೆಯುಂಟಾಗಿದ್ದಿತು. ಎಲೆಯುದುರಿ ಬರಲಂತಿದ್ದ ಗಿಡಗಳು ಚಿಗುರೊಡೆದು ಎಲೆ ಬಲಿತು ಮನೋಹರವಾಗಿ ತೋರುತ್ತಿದ್ದುವು. ಹಿಮಾಚ್ಛಾದಿತವಾಗಿ ಒಣಗಿ ಹೋಗಿದ್ದ ತೃಣಸಂಕುಲಗಳು ಬರ್ಫ (ನೀರ್ಗಡ್ಡೆ)ವು ಕರಗಿಹೋಗಲು ಮತ್ತೆ ತಲೆಯೆತ್ತಿ ಚಿಗುರಿ ಹಸುರುಬಣ್ಣದಿಂದ ಭೂಭಾಗವನ್ನು ಅಲಂಕರಿಸಿ ಭೂದೇವಿಯು ಹಸುರುಡಿಗೆಯಂತೆ ತೋರುತ್ತಿದ್ದುವು. ಹೆಪ್ಪುಗಟ್ಟಿದ ಹಿಮನದಿಗಳು ಕರಗಿ ನೀರಾಗಿ ಸಣ್ಣ ದೊಡ್ಡ ಶಾಖೆಗಳನ್ನು ಕೂಡಿಕೊಂಡು ದೊಡ್ಡ ದೊಡ್ಡ ನದಿಗಳಾಗಿ ಹರಿದು ಗಂಗಾ, ಯಮುನಾ, ಬ್ರಹ್ಮಪುತ್ರಾ, ಸಿಂಧೂ ನದಿಗಳಿಗೆ ಸೇರುತ್ತಿದ್ದುದರಿಂದ ಆ ನದಿಗಳು ಪೂರ್ಣಪ್ರವಾಹದಿಂದ ಹರಿಯುತ್ತಿದ್ದುವು. ಕ್ರಿಮಿಕೀಟಕ ಪಶುಪಕ್ಷಿಗಳಿಗೆಲ್ಲಾ ಆನಂದದ ದಿವಸವೊದಗಿತು. ಮನುಷ್ಯರಿಗಂತೂ ಅತುಲಾನಂದವಾಗತೊಡಗಿತು. ದಕ್ಷಪುರಿಯಲ್ಲಿ ಈ ದಿನ ಮಹೋತ್ಸವ; ದಾಕ್ಷಾಯಿಣಿಯು ಶನಿಪ್ರದೋಶದ ವ್ರತವನ್ನು ಆರಂಭಿಸಿದ್ದಳು. ಪ್ರಜೆಗಳೆಲ್ಲರೂ ತಂಡತಂಡವಾಗಿ ಬಂದು ಅರಮನೆಯಲ್ಲಿ ಕೂಡಿದ್ದರು. ಪ್ರದೋಷಕಾಲವು ಸಮೀಪಿಸಿತು. ಅರಮನೆಯಲ್ಲಿ ಶಿವಪೂಜೆಗೆ ಆರಂಭವಾಯಿತು. ಬ್ರಾಹ್ಮಣರು ವೇದಘೋಷ ಮಾಡುತ್ತಿದ್ದರು. ಸ್ವಯಂ ದಾಕ್ಷಾಯಿಣಿಯು ರುದ್ರಾಕ್ಷಮಾಲೆಗಳನ್ನು ಧರಿಸಿ ಮಹಾ ತಪಸ್ವಿನಿಯಂತೆ ಈಶ್ವರವಿಗ್ರಹದ ಮುಂದೆ ಕುಳಿತು ಪೂಜೆ ಮಾಡುತ್ತಿದ್ದಳು. ದಕ್ಷರಾಜನೂ ಆತನ ಪತ್ನಿಯೂ ಬಳಿಯಲ್ಲಿ ಕೈಜೋಡಿಸಿಕೊಂಡು ಕುಳಿತಿದ್ದರು. ಷೋಡಶೋಪಚಾರಗಳಿಂದ ಪೂಜೆ ಸಾಂಗವಾದಬಳಿಕ ದಾಕ್ಷಾಯಿಣಿಯು ಎದ್ದು ನಿಂತು ಸ್ವಲ್ಪಕಾಲ ಶಿವವಿಗ್ರಹವನ್ನು ನಿರೀಕ್ಷಿಸಿ ಕಣ್ಣುಗಳನ್ನು ಮುಚ್ಚಿಕೊಂಡು ಬದ್ಧಾಂಜಲಿಯಾಗಿ ಕುಳಿತು ಬಳಿಕ ಸಾಷ್ಟಾಂಗವೆರಗಿ ಪ್ರಸಾದವನ್ನು ಸ್ವೀಕರಿಸಿ ಮುಡಿ

ಯಲ್ಲಿಡಲು ಕೈಯೆತ್ತುವಷ್ಟರಲ್ಲಿ ಆಕಾಶದಲ್ಲಿ ಪ್ರತಿಧ್ವನಿಯಾಯಿತು. "ಜಯ! ಶಂಕರ! ಜಯ! ಶಂಕರ!" ದಾಕ್ಷಾಯಿಣಿಯು ಪ್ರಸಾದವನ್ನು ಸ್ವೀಕರಿಸಿ ತಂದೆತಾಯಿಗಳಿಗೂ ಅರ್ಪಿಸಿ ಅತಿಥಿ ನಿರೀಕ್ಷಣೆಗಾಗಿ ಹೊರಗೆ ಬಂದಳು. ಅತಿಥಿಸತ್ಕಾರವು ಅವಶ್ಯ ಕರ್ತವ್ಯವೆಂಬುದನ್ನು ದಾಕ್ಷಾಯಿಣಿಯು ಅರಿತು ನಡೆಯುತ್ತಿದ್ದಳು.

ದಾಕ್ಷಾಯಿಣಿಯು ಅತಿಥಿನಿರೀಕ್ಷಣೆಗಾಗಿ ಹೊರಗೆ ಬರುವಷ್ಟರಲ್ಲಿ ಹಣೆಯಲ್ಲಿ ವಿಭೂತಿಯನ್ನೂ ಕೊರಳಲ್ಲಿ ರುದ್ರಾಕ್ಷಮಾಲೆಗಳನ್ನೂ ಧರಿಸಿಕೊಂಡು ಶಿವನಾಮ ಸಂಕೀರ್ತನೆಯನ್ನು ಮಾಡುತ್ತಿರುವ ಯೋಗಿನಿಯೊಬ್ಬಳು ಅರಮನೆಯ ಮಹಾದ್ವಾರವನ್ನು ದಾಟಿ ಒಳಗೆ ಬರುತ್ತಿದ್ದಳು. ಅರಮನೆಗೆ ಬರುವ ವಿರಕ್ತರನ್ನು ದ್ವಾರಪಾಲಕರು ಯಾವ ಕಾರಣದಿಂದಲೂ ತಡೆಯುತ್ತಿರಲಿಲ್ಲ. ದಾಕ್ಷಾಯಿಣಿಯ ಅಪ್ಪಣೆಯೇ ಹಾಗಿದ್ದಿತು. ಯೋಗಿನಿಯ ವೇಷದಿಂದೊಪ್ಪುತ್ತಿರುವ ಅತಿಥಿಯನ್ನು ನೋಡಿ ಸತಿಗೆ ಅತ್ಯಾನಂದವಾಯಿತು. ಅತಿಥಿವತ್ಸಲೆ ಸತಿಯ ಆದರಸತ್ಕಾರಗಳಿಗೂ ಅವಳ ಅನುಪಮ ವಿವೇಕ ಸುಜ್ಞಾನಗಳಿಗೂ ಮೋಹಿತಳಾದ ಯೋಗಿನಿಯು ಅಂದಿನಿಂದ ದಕ್ಷಪುರಿಯಲ್ಲಿಯೇ ಉಳಿದಳು. ಅವಳು ಸತಿಯನ್ನು ತಂಗಿಯೆಂದು ಕರೆಯುವಳು. ಸತಿಯ ವಿಷಯವಾಗಿ ಅವಳಿಗೆ ಅಪ್ರತಿಮಪ್ರೀತಿ; ಅವಳನ್ನು ಅರೆಗಳಿಗೆ ಅಗಲಿ ಇರಲಾರಳು. ಸತಿಗೂ ಯೋಗಿನಿಯ ಮೇಲೆ ಸಂಪೂರ್ಣ ಭಕ್ತಿ; ಅವಳ ಹೇಳಿಕೆಯನ್ನು ಅಕ್ಷರಶಃ ಅನುಸರಿಸಿ ನಡೆಯುವಳು. ಯೋಗಿನಿಯು ತನ್ನ ಮಾರ್ಗವನ್ನು ಮೆಲ್ಲಗೆ ಸತಿಗೂ ತೋರಿಸತೊಡಗಿದಳು.



## ಮೂರನೆಯ ಪರಿಚ್ಛೇದ

## ಶಿವದರ್ಶನ ರಹಸ್ಯ





ಯೋಗಿನಿಯು ಪ್ರತಿನಿತ್ಯವೂ ಪಂಚಪಂಚ ಉಷಃಕಾಲದಲ್ಲಿ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಬಳಿಯಲ್ಲಿಯೇ ಪ್ರವಹಿಸುವ ಸಿೀಲಧಾರೆಯಲ್ಲಿ ಮಿಂದು ಮಡಿಯುಟ್ಟು ಮೇಲೆ ಬಂದು ಅಲ್ಲಿದ್ದ ಬಿಲ್ವವೃಕ್ಷದ ಕೆಳಗೆ ಕುಳಿತು ಶಿವಪೂಜೆಗೆ ಆರಂಭಿಸುವಳು. ಅವಳು “ಹರ ಹರ ಮಹಾದೇವ!” ಎಂಧು ಧ್ಯಾನಾಸಕ್ತಳಾಗಿರುವುದನ್ನೂ ಆ ಸಮಯದ ಅವಳ ಸಂಪೂರ್ಣ ಶಾಂತಿಯುಕ್ತವಾದ ಮುಖಲಕ್ಷಣವನ್ನೂ ಸತಿಯು ಒಂದೆರಡು ದಿನ ನೋಡಿದಳು. ಮೂರನೆಯ ದಿನವೇ ಯೋಗಿನಿಗೆ ಈಶ್ವರಧ್ಯಾನದಿಂದುಂಟಾಗುವ ಪರಮಾನಂದದ ಮೇಲೆ ಸತಿಗೆ ಪ್ರೀತಿಯುಂಟಾಯಿತು. ಅವಳು ಯೋಗಿನಿಯನ್ನು ತನಗೂ ಈ ಯೋಗಮಾರ್ಗವನ್ನು ಉಪದೇಶಿಸಬೇಕೆಂದು ಕೇಳಿಕೊಂಡಳು.

ಸತಿಯು ತೋರಿಸುವ ಅಪ್ರತಿಮ ಪ್ರೀತಿಯನ್ನೂ ಆಸಕ್ತಿಯನ್ನೂ ನೋಡಿ ಯೋಗಿನಿಯು ಅವಳಿಗೆ ಯೋಗಮಾರ್ಗವನ್ನು ಉಪದೇಶಿಸುವುದನ್ನು ನಿರ್ಣಯಿಸಿದಳು. ಕೆಲವು ದಿನಗಳಲ್ಲಿಯೇ ಸತಿಯೂ ಪ್ರತಿಯೋಗಿನಿಯಾದಳು. ಅಕ್ಕತಂಗಿಯರಿಬ್ಬರೂ ಸದಾ ಈಶ್ವರಧ್ಯಾನದಲ್ಲಿ ನಿರತರಾಗಿರುವುದನ್ನು ನೋಡಿ ದಕ್ಷರಾಜನಿಗೂ ಆತನ ಪತ್ನಿಗೂ ಒಮ್ಮೆ ಆನಂದವೆನಿಸುವುದು; ಒಮ್ಮೆ ವಿಷಾದವೆನಿಸುವುದು. ಸತಿಯು ಸನ್ಮಾರ್ಗನಿರತಳಾಗಿರುವುದು ಅವರ ಆನಂದದ ಕಾರಣವಾಗಿದ್ದಿತು. ಆದರೆ ಈ ಪೂರ್ವವಯಸ್ಸಿನಲ್ಲಿಯೇ ಅವಳು ತೋರಿಸುವ ಪ್ರಪಂಚ ವಿಷಯದ ಅನಾದರದಿಂದ ಅವರಿಗೆ ಬೇಸರವುಂಟಾಗು

ವುದು. ಹೇಗಿದ್ದರೂ ಸತಿಯ ಮೇಲಿನ ಅವರ ಅಂತರಂಗದ ಮೋಹಪಟಲವು ದಿನದಿನಕ್ಕೆ ತೆಳ್ಳಗಾಗುತ್ತ ನಡೆಯಿತು; ಸರಿ. ಅವರಿಗೆ ಈಗ ಸತಿಯ ಪಾಲನ ಪೋಷಣಗಳ ಭಾರವುಳಿಯಲಿಲ್ಲ. ಯೋಗಿನಿಯು ಆ ಭಾರವನ್ನು ಸಂಪೂರ್ಣ ವಾಗಿ ತಾನೇ ವಹಿಸಿಕೊಂಡಿದ್ದಳು.

ಯೋಗಿನಿಯ ಮುಖದಿಂದ ಪ್ರತಿನಿತ್ಯವೂ ಶಿವಮಹಿಮೆಯನ್ನು ಕೇಳಿ ಸತಿಗೆ ಪರಮಾನಂದವಾಗುವುದು. ಯೋಗಿನಿಯು ಉಪದೇಶಿಸುತ್ತಿದ್ದುದೇ ನೆಂದರೆ:—

"ಶಿವನೇ ಸರ್ವೋತ್ತಮನು; ಸರ್ವದೇವತೆಗಳ ಆದಿಪುರುಷನು. ಆದುದ ರಿಂದಲೇ ಅವನಿಗೆ **ದೇವಾಧಿದೇವ, ಮಹಾದೇವ**ನೆಂದು ಹೆಸರು. ಆತನು ತಾನು ಮಂಗಲಮಯನಾಗಿರುವನಲ್ಲದೆ ಸಕಲ ಚರಾಚರಗಳಿಗೂ ಮಂಗಲಕರ ನಾಗಿರುವನು. ಆದುದರಿಂದ ಆತನಿಗೆ **ಶಿವ**ನೆಂದು ಮತ್ತೊಂದು ಹೆಸರು ಬಂದಿದೆ. ಆತನು ಸರ್ವ ಪ್ರಪಂಚವಿಚಾರಗಳನ್ನೂ ಮರೆತುಬಿಟ್ಟು ಯೋಗಾ ಭ್ಯಾಸದಲ್ಲಿ ಸದಾ ನಿರತನಾಗಿರುವನು; ಆದುದರಿಂದಲೇ ಆತನಿಗೆ **ಭೋಲಾ ನಾಥ**ನೆಂದು ಇನ್ನೊಂದು ಹೆಸರು. ಆಹಾ! ಎಷ್ಟು ಸುಂದರವಾದ ಪೆಸ ರಿದು! ಜನರು ಆತನನ್ನು ಬೈಯಲಿ ನಿಂದಿಸಲಿ ಅದರಿಂದ ಆತನಿಗೆ ಎಳ್ಳಷ್ಟೂ ಕೋಪವಿಲ್ಲ. ಎಲ್ಲವನ್ನೂ ಮರೆತುಬಿಡುವನು. ಆತನು ಸುಖದಾಯಕವಾದ ಸ್ಥಳಗಳನ್ನೆಲ್ಲಾ ದೇವತೆಗಳಿಗೆ ಕೊಟ್ಟುಬಿಟ್ಟು ತಾನು ಮನೆಮಾರಿಲ್ಲದೆ ಶ್ಮಶಾನವಾಸಿಯಾಗಿರುವನು! ದೇವತೆಗಳಿಗೆ ಅಮೃತವನ್ನಿತ್ತು ತಾನು ವಿಷ ವನ್ನು ಸ್ವೀಕರಿಸಿರುವನು. ಪರೋಪಕಾರವೇ ಆತನ ಪರಮ ಧ್ಯೇಯ. ತಾನು ಪರಿಪರಿಯಿಂದ ಕಷ್ಟನಷ್ಟಗಳನ್ನು ಅನುಭವಿಸಿಯಾದರೂ ಪರರಿಗೆ ಸಹಾಯಮಾಡಿ ಅವರನ್ನು ಸಂತೋಷಪಡಿಸುವನು. ಇಂತಹ ಪರೋಪಕಾರಿ ಗಳು ಲೋಕದಲ್ಲಿ ತೀರ ವಿರಳ."

ಯೋಗಿನಿಯ ಮುಖದಿಂದ ಈ ರೀತಿಯಾದ ಶಿವಮಹಿಮೆಯನ್ನು ಕೇಳಿ ಸತಿಯ ಕಣ್ಣುಗಳಲ್ಲಿ ನೀರು ತುಂಬಿ ಬರುವುದು. ಅವಳು ದುಃಖದಿಂದ:-

"ಅಕ್ಕಾ! ಆತನಿಗೆ ಯಾರೊಬ್ಬರೂ ಸಹಾಯಕಾರಿಗಳು ಇಲ್ಲವಲ್ಲಾ! ಶ್ಮಶಾನದಲ್ಲಿರುವಾಗ ಆತನಿಗೆ ಎಷ್ಟು ಕಷ್ಟವಾಗುವುದೋ ಯಾರು ಬಲ್ಲರು? ನೀರಡಿಕೆಯಿಂದ ಎದೆಯೊಣಗಿದರೂ ಗುಟುಕು ನೀರನ್ನು ಕೊಡುವವರಿಲ್ಲ;

ಹಸಿವಿನಿಂದ ಜೀವವು ಕಂಠಗತವಾದರೂ ತುತ್ತು ಅನ್ನವನ್ನಿಕ್ಕುವವರಿಲ್ಲ; ಮಳೆಯಲ್ಲಿ ತೋಯಿಸಿಕೊಂಡರೂ ಬೇಸಗೆಯ ಬಿಸಿಲಿನಿಂದ ಬೆಂದು ಬೆಂಡಾದರೂ ಚಳಿಗಾಲದ ಚಳಿಯಿಂದ ಕೈಕಾಲುಗಳು ಸೆಡೆದರೂ ಕೇಳುವರಾರು? ಆತನಿಗೆ ಆಶ್ರಯಕೊಡುವವರಾರು? ಆತನಿಗೆ ಎಷ್ಟು ಕಷ್ಟವಾಗುವುದೋ ತಿಳಿಯದು! ನಾನು ಎಂತಹ ದುರ್ದೈವಿ! ಒಂದುದಿವಸವಾದರೂ ಆತನು ನನಗೆ ದರ್ಶನ ಕೊಟ್ಟಿದ್ದರೆ ಕರೆತಂದು, ಮಜ್ಜನಂಗೈಸಿ, ಮಡಿಯ ಬಟ್ಟೆಯನುಡಿಸಿ, ಹಾಲು ಅನ್ನವನುಣ್ಣಿಸಿ, ಮೆತ್ತನೆಯ ಹಾಸಿಗೆಯಲ್ಲಿ ಮಲಗಿಸಿ ಆನಂದಪಡಿಸುತ್ತಿದ್ದೆನು. ಆದರೆ ಏನು ಮಾಡಲಿ? ನನ್ನ ದೈವದಲ್ಲಿ ಅಂತಹ ಸುಯೋಗವಿದ್ದಂತೆ ಕಾಣುವುದಿಲ್ಲ. ಅಕ್ಕಾ, ಯೋಗಿನೀ, ಹೇಳಬಾರದೇನಮ್ಮಾ! ಶಿವನು ಯಾವ ಶ್ಮಶಾನದಲ್ಲಿರುವನು? ನಾನು ಅಲ್ಲಿಗೆ ಹೋಗಬಹುದೇನು? ಆತನ ಗುರುತುಗಳಾವುವು? ನಾನು ಕರೆದರೆ ಆತನು ಬರಲಿಕ್ಕಿಲ್ಲವೇನಮ್ಮಾ! ಆತನನ್ನು ನಾನು ಹೇಗೆ ನೋಡಬಹುದು? ದಯಮಾಡಿ ತಿಳಿಸಮ್ಮಾ! ನಾನು ಹೋಗಿ ಆ ಪರೋಪಕಾರವ್ರತಿಯಾದ ಶಿವನನ್ನು ವಿನಯದಿಂದ ಬೇಡಿಕೊಂಡು ನಮ್ಮ ಅರಮನೆಗೆ ಕರೆದುಕೊಂಡು ಬರುವೆನು." ಎಂದು ಪರಿಪರಿಯಿಂದ ಯೋಗಿನಿಯನ್ನು ಕೇಳಿಕೊಳ್ಳುವಳು.

ಇದಕ್ಕೇ ನಿಜವಾದ ಭಕ್ತಿಮಾರ್ಗವೆನ್ನುವುದು! ಪ್ರಪಂಚದಲ್ಲಿ ದುಃಖಿಗಳಾದ ಜನರ ದುಃಖವನ್ನು ನೋಡಿದೊಡನೆಯೇ ಕೇಳಿದೊಡನೆಯೇ ಯಾರ ಎದೆ ಕರಗಿ ಕರುಣಾರಸವು ದ್ರವಿಸುವುದೋ ಅವರೇ ನಿಜವಾದ ದೇವಭಕ್ತರು. ಅವರೇ ಈಶ್ವರನನ್ನು ಕಾಣಲು ಯೋಗ್ಯರು. ಜಪತಪ ಹೋಮಹವನಾದಿಗಳು ಈಶ್ವರದರ್ಶನಕ್ಕೆ ಮುಖ್ಯವಾದ ಮತ್ತು ಸುಖಕರವಾದ ಸಾಧನಗಳಲ್ಲ. ಸಕಲ ಪ್ರಾಣಿಗಳನ್ನೂ ಸಮದೃಷ್ಟಿಯಿಂದ ನೋಡಿ ಸದಾ ಭೂತದಯಾಪರನಾಗಿ ನಡೆಯುವುದೇ ಶಿವದರ್ಶನಕ್ಕೆ ನಿಜವಾದ ಸುಲಭ ಸಾಧನವು. **ಶಿವದರ್ಶನದ ರಹಸ್ಯವು ಭೂತದಯೆಯಲ್ಲಿದೆ.**

ಸತಿಯ ಇಂತಹ ಭೂತದಯಾಪರವಾದ ಈಶ್ವರ ಭಕ್ತಿಯನ್ನು ನೋಡಿ ಯೋಗಿನಿಗೆ ಪರಮಾನಂದವಾಯಿತು. ಅವಳು:—

ತಂಗೀ, ಈ ರೀತಿ ಕಾತರಳಾಗಬೇಡ. ಶಿವನ ಮೇಲಿನ ಈ ಅನುರಾಗದ ಮೂಲಕವಾಗಿಯೇ ನೀನು ಈಶ್ವರದರ್ಶನವನ್ನು ನಿಜವಾಗಿಯೂ ಪಡೆಯುವೆ.

ಈ ರೀತಿಯಾಗಿ, ಇಂತಹ ಉದ್ದೇಶದಿಂದ ಅಂತಃಕರಣಪೂರ್ವಕವಾಗಿ ನೀನು ಈಶ್ವರದರ್ಶನದಲ್ಲಿ ಅಪೇಕ್ಷೆಯನ್ನು ತೋರಿಸಿದರೆ ಆತನು ನಿಜವಾಗಿಯೂ ನಿನ್ನನ್ನು ಹುಡುಕಿಕೊಂಡು ಬರುವನು. ಮಗುವೇ, ಸ್ಥಿರಮನಸ್ಸಿನಿಂದ ಆ ಜಟಾಜೂಟಧಾರಿಯೂ ವ್ಯಾಘ್ರಚರ್ಮಾಂಬರಧಾರಿಯೂ ಆದ ಶಿವನನ್ನು ಧ್ಯಾನಿಸು. ನಿನ್ನ ಆತಿಥ್ಯವನ್ನು ಸ್ವೀಕರಿಸುವುದಕ್ಕೆಂದು ಅಂತಃಕರಣ ಪೂರ್ವಕವಾಗಿ ಆತನನ್ನು ಕರೆ. ಆಗ ಆತನು ಸಹಜವಾಗಿ ಬಂದೇ ಬರುವನು. ಆತನನ್ನು ಹುಡುಕಲಿಕ್ಕೆ ನೀನು ಎಲ್ಲಿಗೂ ಹೋಗಬೇಕಾಗಿಲ್ಲ; ಆತನು ಈ ಜಗತ್ತಿನಲ್ಲಿ ಅಣು-ರೇಣು-ತೃಣ-ಕಾಷ್ಠಗಳಲ್ಲಿಯೂ ಪರಿಪೂರ್ಣವಾಗಿ ರುವನು. ಈ ಸೃಷ್ಟಿಯಲ್ಲಿ ನಾವು ಈಶ್ವರನನ್ನು ಹುಡುಕಲಿಕ್ಕೆ ಹೊರಡುವು ದೆಂದರೆ ಕೇವಲ ಮೂರ್ಖತನದ ಮಾತೇ ಸರಿ. ಈಶ್ವರದರ್ಶನಾಪೇಕ್ಷೆಯಿಂದ ನಾವು ಎಷ್ಟು ದೂರ ಪ್ರವಾಸ ಮಾಡುವೆವೋ ಅಷ್ಟುದೂರ ಈಶ್ವರನಿರುವ ಸ್ಥಳದಿಂದ ವಿರುದ್ಧ ದಿಕ್ಕಿಗೆ ಹೋದಂತಾಗುವುದು. ಈಶ್ವರನು ನಮ್ಮ ಅಂತರಂ ಗದಲ್ಲಿಯೇ ವಾಸವಾಗಿರುವನು. ನಾವು ಆತನನ್ನು ಯಾವ ಆಕಾರಪ್ರಕಾರ ಗಳಿಂದ ನೋಡಲು ಅಂತಃಕರಣಪೂರ್ವಕವಾಗಿ ಬಯಸುವೆವೋ, ಆತನು ಅದೇ ಆಕಾರಪ್ರಕಾರಗಳಿಂದ ನಮಗೆ ಗೋಚರನಾಗುವನು. ಶಿವದರ್ಶನಕ್ಕೆ ತಕ್ಕ ಉಪಾಯಗಳೂ ಇವೆ. ಪ್ರಪಂಚದಲ್ಲಿದ್ದು ಪ್ರವೃತ್ತಿಮಾರ್ಗದಿಂದ ಶಿವದರ್ಶನ ಪಡೆಯಬಹುದೆಂದು ಕೆಲವರು ಹೇಳಿದರೆ ಸರ್ವಸಂಗ ಪರಿತ್ಯಾಗ ಮಾಡಿದ ನಿವೃತ್ತಿಮಾರ್ಗವೇ ಈಶ್ವರದರ್ಶನಕ್ಕೆ ಪ್ರಮುಖಸಾಧನವೆಂದು ಕೆಲವರು ಪ್ರತಿಪಾದಿಸುವರು. ಹೇಗಿದ್ದರೂ ಭೂತದಯಾಯುಕ್ತವಾದ ಕರ್ಮಮಾರ್ಗವೇ ಪ್ರಧಾನವಾದುದೆಂದು ಬಹುಮತದಿಂದ ನಿರ್ಣಯ ವಾಗುವುದು.” ಎಂದಳು.

ಸತಿಯು ಇಲ್ಲಿಯವರೆಗೂ ಯೋಗಿನಿಯ ಉಪದೇಶವನ್ನು ಅನಿಮಿಷ ನೇತ್ರೆಯಾಗಿ ಕುಳಿತು ಕೇಳುತ್ತಿದ್ದಳು. ಕರ್ಮಮಾರ್ಗವೇ ಪ್ರಧಾನವಾದು ದೆಂಬ ಮಾತು ಕೇಳಿ ಸತಿಯ ಅಂತರಂಗಕ್ಕೆ ಆಘಾತವಾಯಿತು. ಅವಳಿಗೆ ಕರ್ಮಮಾರ್ಗದಲ್ಲಿ ಆಸಕ್ತಿ ಕಡಿಮೆಯಾಗಿದ್ದಿತು. ಆದುದರಿಂದ ಅವಳು ಕೊಂಚ ಆಕಾಂಕ್ಷಾಯುಕ್ತ ಸ್ವರದಿಂದ:—ಅಕ್ಕಾ, ಕರ್ಮಮಾರ್ಗವೇ ಪ್ರಧಾನವಾದುದೆಂದು ಹೇಳಿದೆಯಲ್ಲವೇ? ಆದರೆ ಅನೇಕರಿಗೆ ಈ ಮಾತು

ಸಮಾಧಾನಕರವಾಗಿಲ್ಲ; ನನಗೂ ಈ ಮಾತು ಸರಿದೋರಲಿಲ್ಲ. ನನಗೆ ಪೂರ್ಣ ವಿಶ್ವಾಸವುಂಟಾಗುವಂತೆ ನೀನು ವಿಷಯವನ್ನು ಚೆನ್ನಾಗಿ ತಿಳಿಸು. ತಿರುಗಿ ಕೇಳಿದೆನೆಂದು ಬೇಸರಗೊಳ್ಳಬೇಡ.

**ಯೋಗಿನಿ:—** ತಂಗೀ, ನಿನ್ನ ಮಾತಿನಿಂದ ನನಗೆ ಎಂದೂ ಬೇಸರ ವುಂಟಾಗಿರಲಿಲ್ಲ. ಇಂದೂ ಬೇಸರವಿಲ್ಲ. ನೀನು ಕೇಳುವ ಪ್ರಶ್ನೆ ಸಮಂಜಸ ವಾಗಿದೆ. ಯಾರು ನಿಜವಾಗಿ ಜ್ಞಾನಿಗಳಾಗಿರುವರೋ ಅವರಿಗೆ ಕರ್ಮದ ಆವಶ್ಯಕತೆಯಿಲ್ಲ. ನೀನು ಅಂತಹಜ್ಞಾನವನ್ನು ಇದುವರೆಗೂ ಪಡೆದಿಲ್ಲ. ನೀನು ಕರ್ಮಾಧಿಕಾರಿಯಾದ ಮುಮುಕ್ಷುವಾಗಿರುವೆಯೆಂದು ನನ್ನ ಭಾವನೆ. ಆದುದರಿಂದ ನೀನು ಫಲಾಪೇಕ್ಷೆಯಿಲ್ಲದೆ ಕರ್ಮಗಳನ್ನು ಮಾಡಲೇಬೇಕು. **"ತಮೇತಂ ವೇದಾನುವಚನೇನ"** ಮುಂತಾದ ಶ್ರುತಿವಚನಗಳ ಮರ್ಮಾನುಸಾರವಾಗಿ ಜ್ಞಾನಕ್ಕೆ ಸಾಧನಭೂತವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಶಾಸ್ತ್ರವಿಹಿತವಾದ ಕ್ರಮಾನುರೋಧದಿಂದ ಮಾಡಬೇಕು. "ಕರ್ಮಗಳು ಹಲವು ವಿಧವಾಗಿವೆ; ಪ್ರಾಪಂಚಿಕ ಕರ್ಮಗಳು ಬೇರೆ, ಪಾರಮಾರ್ಥಿಕ ಕರ್ಮಗಳು ಬೇರೆ" ಎಂದು ಕೆಲವರ ಹೇಳಿಕೆ. ಆದರೆ ನನಗೀ ಮಾತಿನಲ್ಲಿ ವಿಶ್ವಾಸ ಕಡಿಮೆ. ಪ್ರಪಂಚವಿಲ್ಲದೆ ಪರಮಾರ್ಥವಿಲ್ಲ; ಪ್ರಪಂಚವೇ ಪರಮಾರ್ಥ, ಪರಮಾರ್ಥವೇ ಪ್ರಪಂಚ, ಎಂಬುದು ನನ್ನ ನಂಬುಗೆ. ಮನುಷ್ಯನ ಮನಸ್ಸಿನಲ್ಲಿ ಯಾವುದು ಪ್ರಪಂಚವೆಂದು ತೋರುವುದೋ ಅದೇ ಪ್ರಪಂಚ; ಯಾವುದು ಪರಮಾರ್ಥವೆಂದು ತೋರುವುದೋ ಅದೇ ಪರಮಾರ್ಥ. ನವಯೌವನಸಂಪನ್ನೆಯೂ ಸುಂದರಾಂಗಿಯೂ ಆದ ಪತ್ನಿಯ ಮುಖಾವಲೋಕನದಲ್ಲಿ ಅವಳ ಪತಿಯೂ, ಮುದ್ದುಮಗುವಿನ ಆಲಿಂಗನದಲ್ಲಿ ತಾಯಿಯೂ ಈಶ್ವರಸಾಕ್ಷಾತ್ಕಾರವನ್ನು ಪಡೆಯಬಹುದು. "ಯಾವ ಈಶ್ವರನು ಈ ಬಗೆಯ ಪರಮಾನಂದವನ್ನು ಸೃಷ್ಟಿಸಿದನು?" ಎಂಬ ಪ್ರಶ್ನೆ ಬಂದೊಡನೆಯೇ ಆತನಲ್ಲಿ ಅವಿಚಲವಾದ ಶ್ರದ್ಧೆ ಉದಯಿಸದಿರದು. ಶ್ರದ್ಧೆಯೇ ಈಶ್ವರಸಾಕ್ಷಾತ್ಕಾರದ ಮೂಲ. ಅರ್ಥಾತ್ ಪ್ರಪಂಚಮಾರ್ಗವೂ ಅದಕ್ಕನುಗುಣವಾದ ಕರ್ಮಮಾರ್ಗವೂ ಪಾರಮಾರ್ಥಿಕ ಮಾರ್ಗದಿಂದ ಭಿನ್ನವಾಗಿಲ್ಲ." ಸತಿಗೆ ಯೋಗಿನಿಯ ಮಾತಿನಭಾವವು ತಿಳಿಯಿತು. ಆಗ ಅವಳ ಮನೋವೃತ್ತಿ ಬದಲಾಯಿತು. ನಿವೃತ್ತಿಮಾರ್ಗದಲ್ಲಿ ಓಲಾಡುವ ಅವಳ ಮನಸ್ಸು

ಪ್ರವೃತ್ತಿಮಾರ್ಗದ ಕಡೆಗೆ ಹೊರಳಿತು. ಅವಳು ಯೋಗಿನಿಯನ್ನು ಇನ್ನೊಂದು ಮಾತು ಕೇಳಿದಳು. "ಅಕ್ಕಾ ಪ್ರವೃತ್ತಿಮಾರ್ಗವನ್ನವಲಂಬಿಸಿ ಸಂಸಾರವನ್ನು ಮಾಡತೊಡಗಿದರೆ ಆಗ ನಮಗೆ ಅಡಿಗಡಿಗೆ ಒದಗುತ್ತಿರುವ ದುಃಖದಿಂದ ನಾವು ಬೇಸರಗೊಳ್ಳಬಹುದಲ್ಲವೇ? ಹಾಗೆ ಬೇಸರಗೊಂಡರೆ ಮನಸ್ಸಿಗೆ ಸ್ಥಿರವಾದ ಶಾಂತಿಯೆಲ್ಲಿ ಉಳಿಯುವುದು? ಶಾಂತಿಯಿಲ್ಲದ ಬಳಿಕ ನಮ್ಮ ಇಷ್ಟಸಾಧನೆಯಾಗುವ ಬಗೆಯೆಂತು? ಈಶ್ವರಸಾಕ್ಷಾತ್ಕಾರವೆಲ್ಲಿ?"

**ಯೋಗಿನಿ:—** ತಂಗೀ, ಪ್ರಪಂಚದಲ್ಲಿ ಸುಖದುಃಖಗಳೆಂಬ ಎರಡು ಭಿನ್ನ ವಸ್ತುಗಳಿಲ್ಲ. ಸುಖದುಃಖಗಳು ನಮ್ಮ ಮನಸ್ಸಿನಲ್ಲಿಯೇ ಇವೆ. ನಾವು ಯಾವುದಕ್ಕೆ ಸುಖವೆನ್ನುವೆವೋ ಅದೇ ಸುಖ. ಯಾವುದಕ್ಕೆ ದುಃಖವೆನ್ನುವೆವೋ ಅದೇ ದುಃಖ. ಒಬ್ಬರು ದುಃಖವೆನ್ನುವ ಮಾತಿಗೇ ಇನ್ನೊಬ್ಬರು ಸುಖವೆನ್ನುವರು. ಒಬ್ಬರಿಗೆ ಮಜ್ಜಿಗೆಯ ಮೇಲೆ ಪ್ರೀತಿಯಾದರೆ ಇನ್ನೊಬ್ಬರಿಗೆ ಹಾಲಿನ ಮೇಲೆ ಮಮತೆ. ಹಾಲಿನ ಬಯಕೆಯವರಿಗೆ ಹಾಲಿನಿಂದ ಸುಖವಾಗುವುದು; ಮಜ್ಜಿಗೆಯ ಮೆಚ್ಚಿಗೆಯವರಿಗೆ ಮಜ್ಜಿಗೆಯಿಂದ ಸುಖವಾಗುವುದು. ಇಷ್ಟರಿಂದಲೇ ಹಾಲು-ಮಜ್ಜಿಗೆಗಳಲ್ಲಿ ಯಾವುದು ಬೇಕು ಯಾವುದು ಬೇಡ ಎಂದು ನಿರ್ಣಯಿಸಬಹುದೇನು? ಹೀಗೆಯೇ ಪ್ರಪಂಚದ ಸಕಲ ವಿಷಯಗಳು. ವಿಷಯಲಂಪಟರಾಗಿರುವವರಿಗೆ ವಿಷಯಗಳ ಅಭಾವದಿಂದ ಕಷ್ಟವಾಗುವುದು. ಅದೇ ಲಂಪಟತ್ವವಿಲ್ಲದವರಿಗೆ ಅವುಗಳ ಅಭಾವದಿಂದಾಗಲಿ, ವಿಯೋಗದಿಂದಾಗಲಿ ಕಷ್ಟವೆನಿಸದು. ಅರ್ಥಾತ್ ಪ್ರಪಂಚದ ವಿಷಯಗಳಲ್ಲಿ ಸುಖಕರ ಅಥವಾ ದುಃಖಕರವಾದ ಗುಣವಿರದೆ ಅವುಗಳ ವಿಷಯವಾಗಿ ನಮ್ಮ ಮನಸ್ಸಿನಲ್ಲಿರುವ ಲಂಪಟತನವೇ ನಮ್ಮ ಸುಖದುಃಖಗಳಿಗೆ ಕಾರಣವಾಗಿರುವುದು. ಪ್ರಪಂಚದ ಸಕಲ ಕರ್ತವ್ಯಗಳನ್ನೂ ಲಂಪಟತೆಯಿಲ್ಲದೆ ಮಾಡಬೇಕು. ಎಂದರೆ, "ಆದರೆ ಆಯಿತು, ಹೋದರೆ ಹೋಯಿತು," ಎಂಬ ಅನಾದರ ಬುದ್ಧಿಯಿಂದ ಮಾಡಬೇಕೆಂದು ಮಾತ್ರ ಅರ್ಥವಲ್ಲ. ಲಂಪಟತನವಿಲ್ಲದಿರುವ ಮಾತು ಬೇರೆ, ಅನಾದರದ ಮಾತು ಬೇರೆ. ಸಿದ್ಧಿ ದೊರೆಯಲೇಬೇಕೆಂಬ ಆಸ್ತಿಕಭಾವನೆಯು ಕಾರ್ಯದ ಪ್ರವೃತ್ತಿಮಾರ್ಗದಲ್ಲಿ ಇರಬೇಕಾಗಿರುವುದಾದರೂ ನಮ್ಮ ಇಚ್ಛೆಯ ವಿರುದ್ಧವಾಗಿ ಏನಾದರೂ ಒಂದು ಮಾತು ಘಟಿಸಿದರೆ ನಾವು ಅದಕ್ಕೆ ಹಳಹಳಿಸ

ಬಾರದು. ಅದಕ್ಕೊಂದು ಹೊಣೆಯನ್ನು ಹೇಳಬೇಕು. ಕೆಲವರು ದೈವ (ಅದೃಷ್ಟ)ದ ಹೊಣೆಯನ್ನು ಹೇಳುವರು. ಕೆಲವರು ಅಜ್ಞಾನದ ಕಾರಣವನ್ನು ಮುಂದೊಡ್ಡುವರು. ದೈವವಾದಿಗಳಿಗೆ ದೈವದ ಹೊಣೆಯೇ ಪ್ರಿಯಕರವು. ಕರ್ಮವಾದಿಗಳಿಗೆ ಅಜ್ಞಾನದ ಸಮ್ಮತವು. ಹೀಗೆ ಏನೆಂದರೂ ಅರ್ಥವು ಒಂದೇ. "ಆಯಿತೆಂದು ಹಿಗ್ಗಬಾರದು; ಹೋಯಿತೆಂದು ತಗ್ಗಬಾರದು." ಇದೇ ಇದರೊಳಗಿನ ಗೂಢವು.

ಸತಿಯ ಕಣ್ಣುಗಳಲ್ಲಿ ಆನಂದಾಶ್ರು ಉಕ್ಕಿ ಬಂದಿತು. ಅವಳು ಪ್ರೀತಿಯಿಂದ ಯೋಗಿನಿಯನ್ನು ಆಲಿಂಗಿಸಿದಳು. ಸತಿಗೆ ತಂದೆತಾಯಿಗಳ ಕರ್ಮಮಾರ್ಗಪ್ರವೃತ್ತಿಯ ವಿರುದ್ಧವಾಗಿರುವ ತನ್ನ ನಿವೃತ್ತಿಮಾರ್ಗವನ್ನು ಹೇಗೆ ಕಲೆಯಹಾಕಲೆಂಬುದು ಇಂದಿನವರೆಗೂ ಒಂದು ಪ್ರಬಲವಾದ ಚಿಂತೆಯಾಗಿದ್ದಿತು. ಇಂದು ಅವಳಿಗೆ ಸಮಾಧಾನವಾಯಿತು. ಸತಿಯ ಚಿಕ್ಕ ವಯಸ್ಸಿನಲ್ಲಿಯೇ ಅವಳ ವಿವಾಹದ ವಿಚಾರಕ್ಕಾಗಿ ತಾಯಿಯು ಮೇಲೆ ಮೇಲೆ ಮಾತೆತ್ತುತ್ತಿದ್ದಳು. ಅದನ್ನು ಕೇಳಿ ತಾನು ಹೇಗೆ ನಡೆಯಲಿ? ತಂದೆತಾಯಿಗಳನ್ನು ಸಮಾಧಾನಪಡಿಸಿ ತನ್ನ ಅಂತರಂಗದ ನಿವೃತ್ತಿಮಾರ್ಗವನ್ನು ಹೇಗೆ ಕಾಯ್ದುಕೊಳ್ಳಲಿ? ಎಂದು ಅವಳು ಆಲೋಚಿಸಬೇಕಾಗುತ್ತಿದ್ದಿತು. ಯೋಗಿನಿಯ ಮಾತಿನಿಂದ ಅವಳು ಸಮಾಧಾನಹೊಂದಿ ಪ್ರಪಂಚದಲ್ಲಿದ್ದುಕೊಂಡೇ ಪರಮಾರ್ಥವನ್ನು ಸಾಧಿಸಿಕೊಳ್ಳುವೆನೆಂದು ನಂಬಿದಳು. ಮತ್ತು ತನಗೆ ಸಹಾಯಕಾರಿಯೂ ಅನುರೂಪನೂ ಆದ ಪತಿಯನ್ನು ನೋಡಿ ಮದುವೆಯಾಗಬೇಕೆಂದು ಅವಳು ನಿರ್ಣಯಿಸಿದಳು. ಅನುರೂಪನಾದ ಪತಿ ಯಾರು? ಎಂಬ ಪ್ರಶ್ನೆ ಮುಂದೆ ಬಂದೊಡನೆಯೇ ಅವಳಿಗೆ ಹಿಂದೆ ಯೋಗಿನಿಯು ಹೇಳಿದ ಶಿವದರ್ಶನದ ವಿಚಾರವು ಹೊಳೆಯಿತು. ಅವಳು ತಟ್ಟನೆ 'ಅಕ್ಕಾ! ಈಶ್ವರನು ನನಗೆ ದರ್ಶನ ಕೊಟ್ಟು ನನ್ನ ಕೋರಿಕೆಗಳನ್ನು ಪೂರೈಸಬಹುದೇನೇ?' ಎಂದು ಪ್ರಶ್ನೆ ಮಾಡಿದಳು. ಪ್ರಪಂಚಮಾರ್ಗಕ್ಕೆ ಹೊರಳಿದ ಸತಿಯ ಮನಸ್ಸಿನಲ್ಲಿ ಯಾವ ವಿಚಾರವುಂಟಾಗಿ ಅವಳು ಈ ಪ್ರಶ್ನೆ ಮಾಡಿದಳೆಂಬುದನ್ನು ಯೋಗಿನಿಯೂ ತಟ್ಟನೆ ತರ್ಕಿಸಿ ತಿಳಿದುಕೊಂಡುಬಿಟ್ಟಳು. ಅವಳು "ತಂಗೀ, ನೀನು ಬಯಸುವುದನ್ನೆಲ್ಲಾ ಕೊಡಲು ಆತನು ಸಿದ್ಧನಾಗಿದ್ದಾನೆ. ನೀನೇ ನನ್ನ ಪತಿಯಾಗಬೇಕೆಂದರೂ ಆತನು ಒಪ್ಪಿಕೊಳ್ಳುವನು!" ಎಂದಳು. ಯೋಗಿನಿಯ

ಮಾತು ಕೇಳಿ ಸತಿಗೆ ಲಜ್ಜೆಯುಂಟಾಯಿತು. ಆ ಶಶಿಭೂಷಣ ಶಂಕರನೇ ತನ್ನ ಪತಿಯಾಗಬೇಕೆಂಬ ವಿಚಾರವನ್ನು ಸತಿಯು ಅಂತರಂಗದಲ್ಲಿ ನಿರ್ಧರಿಸಿ ಕೊಂಡುಬಿಟ್ಟಳು!

ಬಾಲ್ಯದ ಬಯಲಿನಲ್ಲಿ ವಿಹರಿಸುತ್ತಿದ್ದ ಸತಿಯು ತಾರುಣ್ಯದ ಸೆರೆಮನೆ ಯನ್ನು ಹಣಿಕಿಕ್ಕಿ ನೋಡತೊಡಗಿದಳು. ಸ್ವಭಾವ-ಸುಕುಮಾರವಾದ ಆಕೆಯ ಅಂಗೋಪಾಂಗಗಳು ವಿಕಾಸವಾಗಿ ಬಣ್ಣವೇರಿ ತೋರಿದುವು. ಆದಿ ಮಾಯೆಯ ಅವತಾರವಾಗಿದ್ದ ಅಪ್ರತಿಮ ತೇಜಸ್ಸಿನಿಂದ ಬೆಳಗುತ್ತಿರುವ ಸತೀದೇವಿಯ ಅವಯವಗಳು ತಾರುಣ್ಯ-ಸೂಚಕವಾದ ನೂತನ ಪ್ರಭೆಯಿಂದ ಕೂಡಿ ನೋಡುವವರ ಕಣ್ಣುಗಳನ್ನು ಕುಕ್ಕಿಬಿಡುತ್ತಿದ್ದುವು. ಆದರೆ ಇದೊಂದು ವಿಚಿತ್ರ ಸ್ಥಿತಿ:— ಸರ್ವಾಂಗಸುಂದರಿಯಾಗಿದ್ದ ಸತಿಗೆ ಸಂಸಾರದ ಸುಖದಮೇಲೆ ಅಪ್ರೀತಿ; ಉಡಿಗೆತೊಡಿಗೆಗಳು ಬೇಡ, ಅಲಂಕಾರಗಳು ಬೇಡ, ಹಣೆಗೆ ಕುಂಕುಮಬೇಡ, ತಲೆಗೆ ಎಣ್ಣೆಬೇಡ, ಹೊತ್ತುಹೊತ್ತಿಗೆ ಊಟವೂ ಬೇಡ, ಪ್ರಪಂಚ ಸುಖಕ್ಕೆ ಸಂಬಂಧಿಸಿದ ಯಾವ ವಿಲಾಸದ ಒಡವೆಯೂ ಆವಳಿಗೆ ಬೇಡವೇ ಬೇಡ. ಸತಿಯ ಅಕ್ಕಂದಿರ ಸ್ವಭಾವ ಬೇರೆ; ಇವಳ ಮನಃ ಸ್ಥಿತಿ ಬೇರೆ. ಅವರು ಯಾವಾಗಲೂ ಉಡಿಗೆತೊಡಿಗೆಗಳನ್ನು ಬಯಸುವರು; ಆಟಪಾಟಗಳಲ್ಲಿಯೇ ಹೊತ್ತುಗಳೆಯುವರು. ಇವಳಿಗೆ ಅದಾವುದೂ ಬೇಡ; ಇವಳ ಒಲವೇ ಆಕಡೆಗಿರಲಿಲ್ಲ. ಅವರು ಬೆಲೆಯುಳ್ಳ ವಸ್ತ್ರಾಲಂಕಾರಗಳನ್ನೂ ಕಸ್ತೂರೀ ಚಂದನಾದಿ ಸುಗಂಧದ್ರವ್ಯಗಳನ್ನೂ ಬಯಸುವರು. ಇವಳಿಗೆ ನಾರುಮಡಿಯ ಮೇಲೆ ಬಹು ಪ್ರೀತಿ; ರುದ್ರಾಕ್ಷಮಾಲೆ ಸ್ಫಟಿಕದ ಸರಗಳು ಇವನ್ನು ಧರಿಸಿದಷ್ಟೂ ಬೇಕು. ತಂದೆಯ ಯಜ್ಞಕುಂಡದ ವಿಭೂತಿಯನ್ನು ಮೈಗೆಲ್ಲ ಬಲು ಅಕ್ಕರತೆಯಿಂದ ಬಳಿದುಕೊಳ್ಳುವಳು. ತಲೆಯ ಕೂದಲು ಜಡೆಗಟ್ಟಿದ್ದುವು. ಆದರೇನಾಯಿತು? ಸ್ವಭಾವಸುಂದರಿ. ಈ ಸಮಯದಲ್ಲಿ—

**“ ಇಯಮಧಿಕ ಮನೋಜ್ಞಾ ವಲ್ಕಲೇನಾಪಿ ತನ್ವೀ।**
**ಕಿಮಿವಹಿಮಧುರಾಣಾಂ ಮಂಡನಂ ನಾಕೃತೀನಾಮ್ ॥ ”**

ಎಂಬ ಕವಿಕುಲಗುರು ಕಾಳಿದಾಸನ ಉಕ್ತಿ ಸ್ಮರಣೆಗೆ ಬರುವುದು.



## ನಾಲ್ಕನೆಯ ಪರಿಚ್ಛೇದ

## ವಿವಾಹವಿಚಾರ



ಭಾವಸುಂದರಿಯಾದ ಸತಿಯು ಯೋಗಿನಿಯ ವೇಷದಲ್ಲಿಯೂ ಜಗನ್ಮೋಹಕಳಾಗಿ ಒಪ್ಪುತ್ತಿದ್ದಳು. ಆದರೆ ದಕ್ಷರಾಜನ ಪತ್ನಿಗೆ ಸತಿಯ ವೈರಾಗ್ಯ ವಿಚಾರವನ್ನು ನೋಡಿ ಬಲು ಬೇಸರ; ಅವಳ ಮನಸ್ಸು ಮರುಗುವುದು. ಪ್ರಪಂಚದ ವಿಚಾರ ದಲ್ಲಿಯೂ ಶರೀರಸುಖದ ವಿಷಯವಾಗಿಯೂ ಇಷ್ಟು ಉದಾಸೀನಳಾಗಿ ಕೊರಗುತ್ತಿರುವ ಮಗಳನ್ನು ನೋಡಿದರೆ ಯಾವ ತಾಯಿಯ ಎದೆಯೊಡೆ ಯದು? ಅವಳು ಒಂದು ದಿನ ಮಗಳನ್ನು ಕರೆದು ಬಹು ಕಷ್ಟದಿಂದ— "ಮಗೂ, ನೀನು ಈಗ ದೊಡ್ಡವಳಾಗುತ್ತ ಬಂದೆ. ನಿನ್ನ ಮನಸ್ಸಿನಲ್ಲಿ ಇರುವುದಾದರೂ ಏನು? ಉಡುಗೆಯೇ, ತೊಡುಗೆಯೇ, ಹೆಳಲೇ, ಇಂತಹ ಜೋಗಿಣಿಯನ್ನು ಯಾವಾತನು ಮದುವೆಯಾದಾನೇ?" ತಾಯಿಯ ಕಂಠವು ಬಿಗಿದುಬಂದಿತು. ಎರಡು ಹನಿ ಕಣ್ಣೀರು ತೊಟ್ಟಿಕ್ಕಿತು.

ಸತಿಯು ತಾಯಿಯ ಅವಸ್ಥೆಯನ್ನು ನೋಡಿ ಎಚ್ಚತ್ತಳೆಂಬಂತೆ ತೋರಿತು. ಆಕೆಯು ತಾಯಿಯನ್ನು ಅಪ್ಪಿಕೊಂಡು "ಅಮ್ಮಾ! ಮದುವೆ ಯಾಗುವವರು ಏನೇನು ನೋಡುತ್ತಾರೆ?" ಎಂದು ಕುತೂಹಲದೊಡನೆ ಪ್ರಶ್ನೆಮಾಡಿದಳು. ಆದರೆ ಅವಳ ಮನಸ್ಸಿನೊಳಗಿನ ವಿಚಾರವೇ ಬೇರೆಯಾಗಿ ದ್ದಿತು. ಇಂತಹ ಉಡುಗೆತೊಡುಗೆ ಹೆಳಲು ಮುಂತಾದ ಕೃತ್ರಿಮವಾದ ಅಲಂಕಾರಗಳನ್ನು ಪ್ರೀತಿಸುವವನನ್ನು ನಾನು ಮದುವೆಯಾಗಬೇಕೇ, ಎಂದವಳು ಆಲೋಚಿಸುತ್ತಿದ್ದಳು.

**ತಾಯಿ:—** ಮಗೂ, ಮದುವೆಯಾಗತಕ್ಕವರು ಮೊದಲು ವಧುವಿನ

ಕುಲಗೋತ್ರಗಳನ್ನು ನೋಡುವರು. ಆ ಬಳಿಕ ಅವಳ ಸ್ವಭಾವವನ್ನು ನೋಡುವರು; ಬುದ್ಧಿಕುಶಲತೆಯನ್ನೂ ನೋಡುವರು; ಅಷ್ಟೇ ಅಲ್ಲ-ರೂಪ ಲಾವಣ್ಯಗಳನ್ನು ಕೂಡ ನೋಡಿಯೇ ನೋಡುವರು.

ಸತಿಗೆ ಸ್ವಲ್ಪ ಆಶ್ಚರ್ಯವೆನಿಸಿತು. ಯಾವುದನ್ನು ನೋಡಿದರೂ ಅಡ್ಡಿಯಿಲ್ಲ. ಬಾಹ್ಯಸೌಂದರ್ಯದಲ್ಲಿ ಅವರ ದೃಷ್ಟಿಯೇಕೆಂಬುದು ಆಕೆಯ ಆಕ್ಷೇಪಣೆಯಾಗಿದ್ದಿತು. ಅದನ್ನವಳು ತಾಯಿಯನ್ನು ಕೇಳಿಬಿಟ್ಟಳು.

**ತಾಯಿ:**—ಮಗೂ, ನೀನು ಹೇಳುವುದು ಸರಿ. ಬಾಹ್ಯಸೌಂದರ್ಯವು ಪ್ರಪಂಚದಲ್ಲಿ ಯಾವುದಕ್ಕೂ ಉಪಯೋಗವುಳ್ಳುದಲ್ಲ. ಅಂತರಂಗದ ಸೌಂದರ್ಯವೇ ನಿಜವಾದ ಸೌಂದರ್ಯವು. ಅದನ್ನೇ ಮದುವೆಯಾಗುವವರು ನೋಡಬೇಕು. ಆದರೆ ತಾರುಣ್ಯದಲ್ಲಿ ವಿಷಯಾಸಕ್ತರಾದ ಪುರುಷರಿಗೆ ಬಾಹ್ಯ ಸೌಂದರ್ಯದ ಕಡೆಗೇ ದೃಷ್ಟಿ ಎಳೆಯುವುದಲ್ಲದೆ ಅಂತರಂಗದ-ನಿಜವಾದ, ಸ್ಥಿರವಾದ-ಸೌಂದರ್ಯವು ಅವರ ಅಂಧ-ದೃಷ್ಟಿಗೆ ಕಾಣಿಸದು. ಆದುದರಿಂದ ತರುಣಿಯಾದವಳು ಬಾಹ್ಯಾಂಗಸೌಂದರ್ಯವನ್ನು ಅಸಡ್ಡೆ ಮಾಡಬಾರದು.

ಸತಿಗೆ ಈಗ ಮಾತ್ರ ನಗೆಬಂದಿತು. "ಅಮ್ಮಾ, ನನ್ನನ್ನು ಇಂತಹ ವಿಷಯಾಸಕ್ತನ ಕೊರಳಿಗೆ ಗುದ್ದಿಯಂತೆ ಕಟ್ಟಬೇಕೆನ್ನುವಿರಾ? ಯಾವಾತನು ನನ್ನ ಅಂತರಂಗವನ್ನು ಅರಿತು ನಡೆಯುವನೋ ಆತನನ್ನೇ ಮದುವೆಯಾಗುವೆನು. ಅಂತಿಂತಹ ಪಾಮರನಿಗೆ ನನ್ನನ್ನು ದಾನಮಾಡುವುದಕ್ಕಿಂತ ಅಗೋ, ನೀಲಧಾರೆಯ ಪಕ್ಷದಲ್ಲಿ ನನಗೆ ಸ್ಥಳವಿರುವುದು; ಅಲ್ಲಿಗೆಯೇ ಹೋಗಿ ಸೇರುವೆನು; ಇಲ್ಲವಾದರೆ ಈ ಯೋಗಿನಿಯ ವೇಷವೇನು ನನಗೆ ಅಯೋಗ್ಯವೆನ್ನುವೆಯಾ? ನನ್ನ ಅಕ್ಕ ಯೋಗಿನಿಯು ಶಿವಧ್ಯಾನಾಸಕ್ತಳಾಗಿ ಎಷ್ಟು ಆನಂದದಿಂದ ಇರುವಳು. ನನ್ನನ್ನೂ ಅವಳೊಡನೆ ಕಳುಹಿಬಿಡು.

ತಾಯಿಯ ಅಂತರಂಗಕ್ಕೆ ಬರೆಯಿಕ್ಕಿದಂತಾಯಿತು. ಇವಳೊಡನೆ ಏಕೆ ಮಾತಾಡಲು ಬಂದೆನೆಂದು ಅವಳು ಮನಸ್ಸಿನಲ್ಲಿಯೇ ನೊಂದುಕೊಂಡಳು. ಸ್ವಲ್ಪ ನಾಚಿಕೆಯೂ ಉಂಟಾಯಿತು. ಮಗಳ ಅಪ್ರತಿಮ ಸುವಿಚಾರಗಳನ್ನು ಕೇಳಿ ಅಭಿಮಾನವೆನಿಸಿತು; ಆನಂದವಾಯಿತು. ಅವಳಿನ್ನು ಮಾತಾಡಲಿಲ್ಲ.

ಸತಿಯ ಈ ಸ್ಥಿತಿಯನ್ನು ನೋಡಿ ದಕ್ಷರಾಜನಿಗೂ ಒಮ್ಮೊಮ್ಮೆ ದುಃಖವಾಗುವುದು; ಸ್ವಲ್ಪ ಕೋಪವೂ ಬರುವುದು. ಆದರೆ ಸತಿಯ ಸರಳತನ

ವನ್ನೂ ಆನಂದವೃತ್ತಿಯನ್ನೂ ಮುದ್ದುಮೊಗವನ್ನೂ ನೋಡಿದರೆ ಆ ದುಃಖವು ಸುಖವಾಗಿ ಪರಿಣಮಿಸುವುದು; ಕೋಪವು ಪ್ರೇಮದ ಉದಯಕ್ಕೆ ಕಾರಣವಾಗುವುದು. ಸತಿಯಲ್ಲಿ ಇನ್ನೊಂದು ವಿಶೇಷ ಗುಣವಿದ್ದಿತು. ಅವಳು ಬಹು ಅಭಿಮಾನಿ, ಒಂದು ಮಾತು ಹೆಚ್ಚಿಗೆ ಬಂದರೂ ಸಹಿಸಳು.

ಪುನಃ ನಾಲ್ಕಾರು ತಿಂಗಳು ಕಳೆಯಿತು. ಸತಿಯ ತಾಯಿಗೆ ಮಗಳ ಮದುವೆಯ ವಿಚಾರವು ಹುಟ್ಟಿತು; ತಂದೆಗೆ ಈ ವಿಷಯದಲ್ಲಿ ಇನ್ನೂ ಆಲೋಚನೆ ಹುಟ್ಟಿರಲಿಲ್ಲ. ಸತಿಗೆ ತಕ್ಕ ವರನನ್ನಾರು ಹುಡುಕುವರು? ತನ್ನ ಮನಸ್ಸಿಗೆ ಬರಬೇಕು; ರಾಜನು ಸಮ್ಮತಿಸಬೇಕು; ಸತಿಯು ಒಪ್ಪಿಗೆಯಿರಬೇಕು. ಅವಳು ಒಮ್ಮೆ ತನ್ನ ಮನಸ್ಸಿಗೆ ಬಂದರೆ ಪತಿಯನ್ನು ಹೇಗಾದರೂ ಒಪ್ಪಿಸುವೆನೆಂದು ನಂಬಿದ್ದಳು. ಆದರೆ ಸತಿಯ ಮಾತು ಮಾತ್ರ ಬೇರೆಯಾಗಿದ್ದಿತು. ಅವಳಿಗೆ ಅರಮನೆ ಬೇಡ: ಆರಾಮುಬೇಡ; ಶ್ರೀಮಂತಿಕೆಬೇಡ; ಪತಿಯ ಸೌಂದರ್ಯದ ಚಿಂತೆಯಿಲ್ಲ; ಅತ್ತೆಮಾವಂದಿರ ವಿಚಾರವಿಲ್ಲ; ವರನ ಸದ್ಗುಣ ಸುಸ್ವಭಾವಗಳ ಹೊರತು ಇನ್ನಾವುದರ ಮೇಲೆಯೂ ಅವಳ ದೃಷ್ಟಿಯೇ ಇರಲಿಲ್ಲ. ಇಂತಹ ವರನು ನಮ್ಮ ಯೋಗ್ಯತೆಗೆ ತಕ್ಕವನಾಗಿದ್ದು ದೊರೆಯುವುದು ಹೇಗೆಂದು ತಾಯಿಯು ಅಡಿಗಡಿಗೆ ಚಿಂತಿಸುವಳು. ಅಷ್ಟರಲ್ಲಿ ಅವಳಿಗೊಂದು ಉಪಾಯವು ತೋಚಿತು. "ಸತಿಯ ಚಿಕ್ಕ ತಂದೆಯಿದ್ದಾರಲ್ಲ, ನಾರದರು, ಅವರರಿಯದ ವರನಾರು? ಮೂರೂ ಲೋಕಗಳಲ್ಲಿ ಎಲ್ಲರೂ ಅವರ ಚಿರಪರಿಚಿತರು. ಅವರನ್ನು ಕಂಡರೆ ತಾನೇ ಕೆಲಸವಾಗುವುದು." ಎಂದು ಅವಳು ಲೆಕ್ಕ ಹಾಕಿದಳು. ಒದಗಿ ಬರುವಾಗ ಎಲ್ಲವೂ ಬಂದಕ್ಕೊಂದು ಹೊಂದಿಕೊಂಡೇ ಬರುವುವು. ದಕ್ಷಪತ್ನಿಯು ಈ ರೀತಿ ಆಲೋಚಿಸುವಷ್ಟರಲ್ಲಿ ಅರಮನೆಯ ಹೊರಗೆ ನಾರದರ ವೀಣಾನಾದವೂ ಹರಿನಾಮಸಂಕೀರ್ತನವೂ ಕೇಳಿಬರಲು ಶುಭಲಕ್ಷಣವೆಂದಳು. ಅವಳ ಮುಖವು ಆನಂದದಿಂದ ಅರಳಿತು; ಎಷ್ಟು ಹೊತ್ತಿಗೆ ನಾರದರನ್ನು ಕಾಣುವೆನೋ, ಎಷ್ಟು ಹೊತ್ತಿಗೆ ಸತಿಗೆ ತಕ್ಕ ವರನೆಲ್ಲಿರುವನೆಂದು ಕೇಳುವೆನೋ ಎಂದು ಆತುರಗೊಂಡಳು.

ನಾರದರು ದಕ್ಷರಾಜನನ್ನು ಕಂಡು ಮಾತಾಡಿ ರಾಣಿವಾಸಕ್ಕೆ ಬಂದರು; ತಮ್ಮ ಮಂದಹಾಸ ಪ್ರಭೆಯಿಂದ ದಿಕ್ಕುಗಳನ್ನು ಬೆಳಗುತ್ತ ಶುಭ್ರಮೂರ್ತಿ ನಾರದರು ರಾಣಿಯ ಇದಿರಿಗೆ ಬಂದು ನಿಂತರು. ರಾಣಿಯು ತಕ್ಕ

ಮನ್ನಣೆಯನ್ನಿತ್ತು ವಿನಯದಿಂದ ದೂರದಲ್ಲಿ ನಿಂತುಕೊಂಡಳು. ಅತ್ತಿಗೆಯ ವಿನಯಶೀಲತೆಯನ್ನು ಕಂಡು ನಾರದರಿಗೆ ಆನಂದವಾಯಿತು. ಅವರು, "ಅಕ್ಕಾ, ಎಲ್ಲವೂ ಕುಶಲವೇ? ವಿಶೇಷವೇನು? ಸತಿಯು ಕಾಣಿಸುವುದಿಲ್ಲ ವಲ್ಲ! ಎಲ್ಲಿದ್ದಾಳೆ!" ಎಂದು ಕೇಳಿದರು.

ಕಡೆಯ ಮಾತು ಕಿವಿಗೆ ಬಿದ್ದೊಡನೆಯೇ ರಾಣಿಯ ಮುಖಲಕ್ಷಣವು ಬದಲಾಯಿತು. ಅವಳು ವ್ಯಸನಾಕ್ರಾಂತ ಸ್ವರದಿಂದ "ಸತಿಯ ವಿಚಾರ ವನ್ನೇನು ಹೇಳಲಿ? ಅವಳ ಸ್ಥಿತಿ ದಿನದಿನಕ್ಕೂ ಬದಲಾಗುತ್ತ ನಡೆದಿದೆ. ಪ್ರಪಂಚದ ವಿಚಾರಗಳ ಮೇಲೆ ಅವಳಿಗೆ ಆಸ್ಥೆಯೇ ಕಡಿಮೆ. ನೀಲಧಾರೆ ಯಾಯಿತು, ಶಿವಮಂದಿರವಾಯಿತು, ತಾನಾಯಿತು. ಅವಳಿಗೊಬ್ಬ ಜೋಗಿಣಿ ಬೇರೆ ಗಂಟುಬಿದ್ದಿದ್ದಾಳೆ. ಅವಳಿಂದಲೇ ಇಷ್ಟೆಲ್ಲ ಅನರ್ಥವಾಯಿತೆನ್ನಬೇಕು. ಆದರೆ ಮಾಡುವುದೇನು? ಆ ಜೋಗಿಣಿಯು ಇಲ್ಲಿಂದ ಹೊರಟರೆ ಸತಿಯೂ ಹೊರಡುವಳು. ಅವಳೊಡನೆಗೆ ಸತಿಗೆ ಅಷ್ಟೊಂದು ಆತ್ಮೀಯಭಾವನೆ. ನಾವೀಗ ಇನ್ನೊಂದು ವಿಚಾರವನ್ನು ಹುಡುಕಿದ್ದೇವೆ. ಸತಿಯನ್ನು ತಕ್ಕ ಮಾರ್ಗಕ್ಕೆ ಹಚ್ಚಬೇಕಾದರೆ ಅವಳಿಗೆ ವಿವಾಹಮಾಡಬೇಕು. ಆದರೆ ಅದ ಕ್ಕೊಂದು ದೊಡ್ಡ ಸಂಕಟ. ಸತಿಗೆ ತಕ್ಕ ಪತಿಯೆಲ್ಲಿ? ಆದುದರಿಂದಲೇ ನಾನು ತಮ್ಮ ಆಗಮನವನ್ನು ನಿರೀಕ್ಷಿಸುತ್ತಲಿದ್ದೆನು." ಎಂದಳು.

ನಾರದರಿಗೆ ಇಷ್ಟೇ ಸಾಕಾಯಿತು, "ಇದಕ್ಕೇಕೆ ಇಷ್ಟೊಂದು ಚಿಂತೆ? ಎಲ್ಲವೂ ಸಿದ್ಧವಾಗಲಿ, ವರನನ್ನು ತರುವುದು ನನಗಿರಲಿ." ಎಂದವರು ಒಂದೇ ಮಾತಿನಲ್ಲಿ ಮುಗಿಸಿದರು.

ರಾಣಿಗೆ ನಾರದರ ಮಾತಿನಿಂದ ಪರಮಾನಂದವಾಯಿತು. ಅವಳು ದಾಸಿಯನ್ನು ಕಳುಹಿ ರಾಜನನ್ನು ಕರೆಯಿಸಿದಳು.

ನಾರದರೂ ದಕ್ಷನೂ ದಕ್ಷಪತ್ನಿಯೂ ಒಂದೆಡೆಯಲ್ಲಿ ಕಲೆತರು. ಆಗ ಈ ರೀತಿ ಮಾತು ಕಥೆಗಳು ನಡೆದುವು:—

**ನಾರದ:**—ನಮ್ಮ ಸತಿಗೆ ಒಬ್ಬ ಉತ್ತಮ ಪತಿಯನ್ನು ನೋಡಿ ಬಂದಿರುವೆನು. ಅಂತಹ ಯೋಗ್ಯನಾದ ವರನನ್ನು ಇನ್ನೆಲ್ಲಿಯೂ ನೋಡಿಲ್ಲ.

ದಕ್ಷರಾಜನಿಗೆ ಆನಂದವಾಯಿತು. ಅವನು ಕುತೂಹಲದಿಂದ "ಅಂತಹ ವರನಾರು?" ಎಂದು ಕೇಳಿದನು.

**ನಾರದ:—** ಕೈಲಾಸಗಿರಿಯ ರಾಜನು.

ಇದನ್ನು ಕೇಳಿ ದಕ್ಷರಾಜನ ಮುಖವು ಬಾಡಿತು. ಅವನು ನಾರದರನ್ನು ಏನೋ ಕೇಳಬೇಕೆಂದು ಮಾತೆತ್ತುವಷ್ಟರಲ್ಲಿ........

**ರಾಣಿ:—** ಕೈಲಾಸಗಿರಿ! ಎಷ್ಟು ದೂರ! ನಮ್ಮ ಸತಿಯನ್ನು ಅಷ್ಟು ದೂರ ಕೊಟ್ಟರೆ ಮೇಲೆ ಮೇಲೆ ಹೋಗುಬರುವುದೆಂತು? ಅವಳಲ್ಲಿ ! ನಾವಿಲ್ಲಿ ಹೀಗಾಗುವುದು. ಅವಳ ಸುಖದ ಸುದ್ದಿಯನ್ನಾದರೂ ಕೇಳುವುದು ಬೇಡವೇ? ಮೇಲಾಗಿ ಕರೆಯಿಸುವುದಕ್ಕೂ ಕಳುಹಿಸುವುದಕ್ಕೂ ಬಹಳ ತೊಂದರೆ.

ನಾರದರು ನಕ್ಕರು. ಸೈ! ತಾಯಿಗೆ ಬೇಕಾದ ಮಾತೇ ಇದು. ಮಗಳು ಮನೆಯ ನೆರೆಯಲ್ಲಿಯೇ ಇದ್ದರೆ ಅವಳಿಗೆ ಆನಂದ. ನಿಮಗೆ ನನ್ನದೊಂದು ಪ್ರಶ್ನೆ. ಸತಿಯು ಹೋಗುಬರುವುದಕ್ಕೆ ಅನುಕೂಲವಾಗುವಂತೆ ಸಮೀಪದಲ್ಲಿ ಹೇಗಾದರೂ ಇರಬೇಕೆನ್ನುವಿರಾ? ಯೋಗ್ಯನಾದ ಪತಿಯೊಡನೆ ದೂರದಲ್ಲಿಯೇ ಆದರೂ ತನ್ನ ಮನೆಯಲ್ಲಿ ಆನಂದದಿಂದ ಇರಬೇಕೆನ್ನುವಿರಾ? ಸತಿಯು ಪತಿಯೊಡನೆ ಆನಂದದಿಂದ ತನ್ನ ಮನೆಯಲ್ಲಿಯೇ ಇದ್ದುಕೊಂಡರೆ ಅದರಿಂದ ನಿಮಗಾಗುವ ಹಾನಿಯಾದರೂ ಏನು?

**ಅರಸನೂ ಅರಸಿಯೂ:—** ಸರಿ. ಆಗಬಹುದು. ಎಲ್ಲಿಯಾದರೂ ಮಗಳು ಸುಖವಾಗಿ ಇರಬೇಕೆಂಬುದೇ ನಮ್ಮ ಕೋರಿಕೆ. ಆ ಸುಖವನ್ನು ಕಣ್ಣಾರೆ ಕಾಣಬೇಕೆಂಬುದೂ ನಮ್ಮ ಬಯಕೆಯಾಗಿದ್ದಿತು. ಆದರೆ ಅದಕ್ಕನುಕೂಲವಾಗದಿದ್ದರೆ ಅವಳು ಸುಖದಿಂದಿರುವುದನ್ನು ಕಿವಿಯಾರೆ ಕೇಳಿಯಾದರೂ ಆನಂದಪಡುವೆವು. ಮಗಳು ತೊಡೆಯ ಮೇಲೆ ಅಳುತ್ತ ಕುಳ್ಳಿರುವುದಕ್ಕಿಂತ ಗುಡ್ಡದ ಮೇಲೆ ಆನಂದದಿಂದ ತಿರುಗುತ್ತಿದ್ದರೂ ಆಗಬಹುದು.

**ನಾರದ:—** ಸರಿ. ಸರಿ. ಇನ್ನೇನು ನಿಮ್ಮ ಬಯಕೆ?

**ದಕ್ಷ:—** ವರನ ವಿದ್ಯಾಬುದ್ಧಿಗಳು ಎಂತಿರುವುವು?

**ನಾರದ:—** ಅದನ್ನೇನು ಹೇಳಲಿ? ವೇದಶಾಸ್ತ್ರಪುರಾಣ ಮಂತ್ರತಂತ್ರಗಳಲ್ಲಿ ಅವನರಿಯದಿರುವುದು ಇಲ್ಲವೇ ಇಲ್ಲ. ಈ ವಿಷಯದಲ್ಲಿ ಬೇರೆ ನಿದರ್ಶನವೇತಕ್ಕೆಬೇಕು? ಮಹರ್ಷಿ ವಶಿಷ್ಠನು ವೇದಗಳ ತತ್ವವನ್ನೂ, ಪರಶುರಾಮನು ಧನುರ್ವೇದವನ್ನೂ, ಅಷ್ಟೇಕೆ? ನಾನೇ ಗಂಧರ್ವವೇದವನ್ನೂ ಆತನಿಂದಲೇ ಕಲಿತುಕೊಂಡೆವಲ್ಲವೇ? ದಕ್ಷನ ಮುಖವು ಆನಂದ

ದಿಂದ ಅರಳಿತು. ಅವನು ಮತ್ತೆ ನಾರದರನ್ನು ಕುರಿತು ವರನ ಬಲವೀರ್ಯ ಗಳೆಂತಿರುವುವು? ಎಂದು ಪ್ರಶ್ನೆ ಮಾಡಿದನು.

**ನಾರದ:—** ಸಕಲ ಲೋಕಪ್ರಸಿದ್ಧವಾದ ಪಿನಾಕಧನಸ್ಸು ಆತನ ಕೈಯಲ್ಲಿ ಹಗಲಿರುಳೂ ಇರುವುದು. ಮೂರು ಲೋಕಗಳಲ್ಲಿಯೂ ಅದರ ಹೆದೆಯೇರಿಸುವುದು ಕೂಡ ಯಾರಿಂದಲೂ ಆಗದು-ಕಂಡಿರಾ! ಅವನು ಯಾರಿಗೂ ಸಗ್ಗದ ತ್ರಿಪುರಾಸುರ ಗಜಾಸುರರನ್ನು ಅನಾಯಾಸವಾಗಿ ಕೊಂದು ಕೆಡಹಿದನು!

**ಅರಸಿ:—** ನಾರದರೇ, ವರನ ಆಕಾರರೂಪಗಳೆಂತಿರುವುವು?

**ನಾರದ:—** ಕೇಳುವುದೇನು? ಸಾಲವೃಕ್ಷದಂತೆ ಎತ್ತರವಾದ ಆ ನಿಲುವಿಕೆಯೂ ಮೊಳಕಾಲವರೆಗೆ ಉದ್ದವಾದ ಆ ತೋಳುಗಳೂ ಕಿವಿಯವರೆಗೆ ವಿಶಾಲವಾದ ಆ ಕಣ್ಣುಗಳೂ ಬೆಳ್ಳಿಯಂತೆ ಬಿಳಿದಾದ ಆ ಮೈಯ ಹೊಳವೂ ಆ ಸುಂದರ ಪ್ರಸನ್ನಮುಖವೂ ನೋಡುವವರನ್ನು ಮರುಳುಗೊಳಿಸುವುವು. ಆತನ ರೂಪಕ್ಕೆ ತಕ್ಕ ಸುಂದರ ಕನ್ಯೆಯೇ ಇಲ್ಲವೆಂದರೂ ಸಲ್ಲುವುದು. ಆದರೂ ನಮ್ಮ ಸತಿಯು ಆತನಿಗೆ ತಕ್ಕ ಸತಿಯೆನ್ನಬಹುದು.

**ಅರಸಿ:—** ನಾರದರೇ, ವರನ ಐಶ್ವರ್ಯವೆಷ್ಟು? ನಮ್ಮ ಸತಿಗೇನಾದರೂ ನಾಲ್ಕು ಆಭರಣಗಳನ್ನಿಡುವಂತಿರುವನೇ?

**ನಾರದ:—** ದೇವೀ, ಏನು ಹೇಳಲಿ? ಆತನು ರತ್ನಗರ್ಭ ಕೈಲಾಸ ಗಿರಿಯ ಒಡೆಯನು. ಧನಾಧಿಪತಿ ಕುಬೇರನು ಆತನ ಮಿತ್ರನು. ಕುಬೇರನ ಹೆಸರನ್ನು ಕೇಳದವರಾರು? ಅವನ ಬೊಕ್ಕಸದಲ್ಲಿರುವಷ್ಟು ವಜ್ರ-ವೈಡೂರ್ಯ-ಮರಕತ-ಮಾಣಿಕ್ಯಾದಿ ರತ್ನಗಳು ಇನ್ನೆಲ್ಲಿವೆ? ಹೀಗಿದ್ದು ನಿನ್ನ ಮಗಳಿಗೆ ಎಷ್ಟು ಅಲಂಕಾರಬೇಕು?

**ಅರಸಿ:—** ವರನ ಬಳಗವೆಷ್ಟು? ಮನೆಯಲ್ಲಿ ತಾಯಿಯಿರುವಳೇ? ಸತಿಗೆ ಅತ್ತಿಗೆ ನಾದಿನಿಯರಾರಾದರೂ ಇರುವರೇ?

**ನಾರದ:—** ಇದೊಂದು-ಹೆಣ್ಣುಕೊಡುವ ಹೆಂಗುಸರಿಗೆ ಬೇಕಾದ ಮಾತು. ನಿಮ್ಮ ಸತಿಗೆ ಅತ್ತೆಯಿಲ್ಲ, ಕಾಡುವ ಅತ್ತಿಗೆಯರಿಲ್ಲ; ಮದುವೆಯಾದ ಮರುದಿನವೇ ನಿಮ್ಮ ಮಗಳು ಕೈಲಾಸಗಿರಿಯ ಯಜಮಾನಿಯಾಗುವಳು. ಅವಳೇ ಮನೆತನದ ಸರ್ವೇಶ್ವರಿ! ಇನ್ನೇನು ಬೇಕು?

ರಾಣಿಯು ನಾರದರ ಮಾತುಗಳನ್ನು ಕೇಳಿ ಆನಂದದಿಂದ ಅವರ ಮುಖವನ್ನು ನೋಡಿದಳು. ನಾರದರದು ಇನ್ನೊಂದು ಗುಣ. ಮಾತು ಮಾತಿನ ಮೇಲೆ ಆಕಾಶಕ್ಕೆ ಮುಟ್ಟಿಸಿ ಮುಂದಿನ ಮಾತಿನಲ್ಲಿಯೇ ಪಾತಾಳಕ್ಕೆ ಕೆಡಹುವ ಯುಕ್ತಿ ನಾರದರಿಗೆ ಸಂಪೂರ್ಣವಾಗಿ ಸಾಧಿಸಿದ್ದಿತು. ಅವರು ಪುನಃ "ದೇವೀ, ವರನಲ್ಲಿ ಸ್ವಲ್ಪದೋಷವೂ ಇದೆ. ಇದ್ದ ದೋಷಗಳನ್ನೆಂತು ಮುಚ್ಚಿಡಲಿ? ವರನಿಗೆ ಸಂಸಾರದಲ್ಲಿ ಆಸ್ಥೆ ಕಡಿಮೆ. ಆದುದರಿಂದ ಅವನಿಗೆ ಅರಮನೆಯೂ ಒಂದೇ; ಶ್ಮಶಾನವೂ ಒಂದೇ; ಚಂದನವೂ ಒಂದೇ; ಚಿತಾ ಭಸ್ಮವೂ ಒಂದೇ. ಆತನು ಸದಾ ಚಿಂತಾಗ್ರಸ್ತನು, ಆದರೆ ಆತನಿಗೆ ಸ್ವಂತ ಸುಖಕ್ಕಾಗಿ ಚಿಂತೆಯಿಲ್ಲ; ಜಗತ್ತಿನ ಹಿತಕ್ಕಾಗಿ ಆತನು ಹಗಲಿರುಳೂ ಚಿಂತಿಸುತ್ತಿರಬೇಕಾಗುವುದು. ಆತನಿಗೆ ರತ್ನಾಲಂಕಾರಗಳು ಬೇಕಾಗಿಲ್ಲ; ಹಳೆಯ ಮೂಳೆಗಳಾದರೂ ಸಾಕು. ಆತನಿಗೆ ಅಮೃತಾನ್ನವಾದರೂ ಅಷ್ಟೇ; ಕಾಲಕೂಟ-ವಿಷವಾದರೂ ಅಷ್ಟೇ. ಪರೋಪಕಾರವ್ರತಿಯಾಗಿರುವನು. ಪರೋಪಕಾರಕ್ಕಾಗಿ ಆತನು ಕಾಲಕೂಟ-ವಿಷವನ್ನು ಪಾನಮಾಡಿದನು. ಈ ಎಲ್ಲ ಕಾರಣಗಳಿಂದ ಆತನು ರಾಜನಾಗಿಯೂ ಭಿಕ್ಷುಕನು; ಗೃಹಸ್ಥನಾಗಿಯೂ ಸಂನ್ಯಾಸಿ. ಎಲ್ಲವೂ ಇದ್ದು ಏನೂ ಇಲ್ಲದವನು!

ಸರಿ. ರಾಣಿಯು ಆಕಾಶಕ್ಕೆ ಮುಟ್ಟಿದ್ದವಳು ಅದೇ ನಾರದರ ಮಾತಿನಿಂದಲೇ ಪಾತಾಳಕ್ಕೆ ಬಿದ್ದುಬಿಟ್ಟಳು. ನಾರದರು ಇಷ್ಟು ಹೊತ್ತಿನವರೆಗೆ ಹೇಳಿದ ವರನ-ರೂಪ-ಗುಣ-ಐಶ್ವರ್ಯಗಳ ವರ್ಣನೆಯನ್ನು ಕೇಳಿ ಆನಂದಿತಳಾಗಿದ್ದಳು. ಆದರೆ ಒಂದೇ ಒಂದು ಮಾತಿನಿಂದ ಅವಳ ಆನಂದವೆಲ್ಲ ಅಳಿಸಿಹೋಯಿತು. ವರನು ಸಂನ್ಯಾಸಿ! ಇಂತಹ ಸಂನ್ಯಾಸಿಗೆ ಮಗಳನ್ನು ಕೊಟ್ಟು ಮಾಡಬೇಕೇನು? ಸಂನ್ಯಾಸಿಯ ವಿವಾಹಕ್ಕೆ ಜುಟ್ಟು ಜನಿವಾರಗಳೂ ಹೊರಗಿನಿಂದ ಬರಬೇಕು. ಏನಿದ್ದರೇನು? ರಾಣಿಯ ಮನಸ್ಸು ಇಳಿದುಹೋಯಿತು. ದಕ್ಷರಾಜನಿಗೂ ಸ್ವಲ್ಪ ಅಸಮಾಧಾನವಾಯಿತು. ಇದನ್ನು ನೋಡುತ್ತ ಬಳಿಯಲ್ಲಿಯೇ ನಿಂತ ನಿಪುಣ ದಾಸಿಯೊಬ್ಬಳು ಅವರ ಮನಸ್ಸನ್ನು ಸಮಾಧಾನಪಡಿಸುವಂತೆ ಮಾತಾಡಿದಳು. ಅವಳು ಅರಸಿಯ ಮುಖವನ್ನು ನೋಡಿ, "ದೇವೀ, ಚಿಂತಿಸುವಿರೇಕೆ? ಸತಿಯ ಯೋಗ್ಯತೆಯನ್ನು ತಾವು ಅರಿತಿರುವಿರಲ್ಲವೇ? ಆಕೆ ಈಗ ಸಂಸಾರದಲ್ಲಿ ಅನಾದರವನ್ನು

ತೋರಿಸುವಳಾದರೂ ಇಚ್ಛಾನುರೂಪನಾದ ಪತಿ ದೊರೆತರೆ ಸಂನ್ಯಾಸಿಯನ್ನೂ ಸಂಸಾರಿಯನ್ನಾಗ ಮಾಡುವುದರಲ್ಲಿ ಸಂಶಯವಿಲ್ಲ. ಲಗ್ನವಂತೂ ಆಗಲಿ, ನಮ್ಮ ಸತಿದೇವಿಯು ಒಂದೇ ಒಂದು ತಿಂಗಳಲ್ಲಿ ಸಂ ನ್ಯಾಸಿ ಸದಾಶಿವನನ್ನು ಉತ್ತಮ ಸಂಸಾರಿಯನ್ನಾಗಿ ಮಾಡುವುದರಲ್ಲಿ ಸಂಶಯವಿಲ್ಲ. ಪತಿಯನ್ನು ಸಂನ್ಯಾಸಿಯಾಗಿ ಮಾಡುವುದೂ ಸಂಸಾರಿಯಾಗಿ ಮಾಡುವುದೂ ಸತಿಯ ಕೈಯಲ್ಲಿರುವುದು.'' ಎಂದಳು.

ಇದನ್ನು ಕೇಳಿ ಅರಸಿಯು ಸಮಾಧಾನವನ್ನು ಹೊಂದಿದಳು. ಅವಳು:- ನಾರದರೇ, ಎಲ್ಲ ಗುಣಗಳೂ ಏಕತ್ರವಾಗಿ ದೊರೆಯುವುದು ದುರ್ಲಭ. ದೋಷಕ್ಕಿಂತಲೂ ಗುಣವು ಹೆಚ್ಚಾಗಿರಬೇಕು. ಯೋಗ್ಯನಾದ ವರನನ್ನು ನೋಡಿ ಮಗಳನ್ನು ಕೊಡುವುದು ತಾಯ್ತಂದೆಗಳ ಕರ್ತವ್ಯ. ಇನ್ನು ಆಗುವುದೂ ಹೋಗುವುದೂ ಅವರವರ ಅದೃಷ್ಟವನ್ನು ಅವಲಂಬಿಸಿರುವುದು. ಸತ್ಕುಲಪ್ರಸೂತನೂ ಸದ್ಗುಣಿಯೂ ಶ್ರೀಮಂತನೂ ಸುಂದರನೂ ಆದವನಿಗೆ ಮಗಳನ್ನು ಕೊಡಬೇಕೆಂಬುದೇ ನನ್ನ ಬಯಕೆ. ಮಹಾರಾಜರವರ ಹೇಳಿಕೆಯೇನಿರುವುದೋ ಕೇಳಬೇಕು.'' ಎಂದಳು.

**ದಕ್ಷ:**— ಅರಸೀ, ನನ್ನನ್ನೇನು ಕೇಳುವುದು? ವಿಧಿಯ ಇಚ್ಛೆ. ಋಣಾನುಬಂಧವಿಲ್ಲದಿದ್ದರೆ ಹೊಂದಿಸುವುದು ನಮ್ಮಿಂದಾಗದು. ಹಾಗೇನಾದರೂ ಇದ್ದರೆ ಬಿಡಿಸುವುದೂ ನಮಗೆ ಸಾಧ್ಯವಿಲ್ಲ. ನನಗೇಕೋ ಈ ಸ್ಥಳವು ಪ್ರಶಸ್ತವೆಂದು ತೋರುವುದು. ನಿನ್ನ ಮನಸ್ಸಿಗೂ ಬಂದರೆ ಇದೇ ವರನನ್ನು ಗೊತ್ತುಮಾಡುವ.

ಹೆಚ್ಚಿನದೇನೂ ವಿಚಾರ ನಡೆಯಲಿಲ್ಲ. ಕೈಲಾಸಪತಿ ಶಂಕರನಿಗೆ ಸತಿಯನ್ನು ಕೊಡುವುದು ನಿರ್ಣಯವಾಯಿತು; ಮುಹೂರ್ತವೂ ನಿಷ್ಕರ್ಷೆಯಾಯಿತು. ಶಂಕರನನ್ನು ಒಪ್ಪಿಸಿ ಲಗ್ನಕ್ಕೆ ಕರೆತರುವುದು ನಾರದರ ಕೆಲಸವೆಂದು ಮೊದಲೇ ಗೊತ್ತಾಗಿದ್ದಿತು. ದಕ್ಷರಾಜನು ಮದುವೆಯ ಸಿದ್ಧತೆಯನ್ನು ಮಹಾ ವೈಭವದೊಡನೆ ಆರಂಭಿಸಿದನು.



## ಐದನೆಯ ಪರಿಚ್ಛೇದ

# ವಿವಾಹೋತ್ಸವ



ಕೈಲಾಸಪತಿ ಶಂಕರನೇ ಸತಿಯ ಪತಿಯೆಂದು ದಕ್ಷರಾಜನೂ ರಾಣಿಯೂ ನಾರದರೂ ಸರ್ವಾನುಮತದೊಡನೆ ನಿರ್ಣಯಿಸಿದರು. ಈ ಮಾತು ಅಲ್ಲಿರುವ ದಾಸಿಯರಿಗೂ ತಿಳಿಯಿತು. ಸತಿಯ ಪ್ರೀತಿಯವಳಾದ ಓರ್ವದಾಸಿಯು ಓಡುತ್ತಹೋಗಿ "ಅಕ್ಕಾ, ಸತೀ, ಮದುವೆ ಗೊತ್ತಾಯಿತು; ಕೈಲಾಸಪತಿ ಶಂಕರನು ನಿನ್ನ ಪತಿಯಂತೆ! ಸತಿಗೆ ತಕ್ಕ ಪತಿ! ಪತಿಗೆ ಪ್ರಪಂಚಬೇಡ; ಸತಿಗೆ ಸಂಸಾರಬೇಡ." ಎಂದು ಪರಿಹಾಸಮಾಡಿದಳು. ಪರಿಚಾರಿಕೆ ವಿರಕ್ತೆಯ ದಿನದ ಅಭ್ಯಾಸವಿದು. ಇವಳು ಬಹುಕುಚೇಷ್ಟೆಗಾರ್ತಿ. ಸತಿಗೂ ಇವಳ ಚೇಷ್ಟೆಯಿಂದ ಒಮ್ಮೆ ನಾಚಿಕೆಯೆನಿಸುವುದು, ಒಮ್ಮೆ ಬೇಸರವಾಗುವುದು, ಒಮ್ಮೆ ಸ್ವಲ್ಪ ಕೋಪವೂ ಬರುವುದು. ಆಗ "ಎಂತಹ ಕುಚೇಷ್ಟೆಯಿದು, ಹೊತ್ತಿಲ್ಲ; ವೇಳೆಯಿಲ್ಲ; ಯಾವಾಗಲೂ ಚೇಷ್ಟೆಯೇ!" ಎಂದಿಷ್ಟೇ ನುಡಿಯುವಳು. ಸತಿಯ ಕೋಪದ ಮಾತಿದು! ಎಂತಹ ಕೋಮಲ ಹೃದಯದವಳಿವಳು? ಸತಿಯು ದಾಸಿಯ ಈಗಿನ ಮಾತಿನಿಂದ ಸಿಟ್ಟಿಗೇಳಲಿಲ್ಲ; ಆನಂದವನ್ನೂ ತೋರ್ಪಡಿಸಲಿಲ್ಲ. ನಾಚಿಕೆಯ ಛಾಯೆಯಿಂದ ಕೂಡಿದ ಮನಃಶಾಂತಿಯುಕ್ತವಾದ ಕಳೆಯೊಂದು ಆಕೆಯ ಮುಖದಲ್ಲಿ ಮೂಡಿತು. ಮುಖವು ಹೃದಯದ ವಿಕಾರಗಳ ಪ್ರತಿಬಿಂಬವನ್ನು ತೋರಿಸುವ ವಜ್ರದ ದರ್ಪಣವೇಸರಿ. ಸತಿಯ ಆ ಸುಕುಮಾರವಾದ ಮುಖದರ್ಪಣದಲ್ಲಿ ಪ್ರತಿಬಿಂಬಿತವಾದ ವಿಚಾರದ ಛಾಯೆಯು ಅವಳ ಪ್ರೀತಿಯ ದಾಸಿಗೆ ಕಾಣಿಸದಿರಲಿಲ್ಲ. ಅವಳು ಆನಂದದಿಂದ:—"ಅಕ್ಕಾ, ಸತೀ, ನೀನಿಂದು ಧನ್ಯಳಾದೆ। ಈ ಲೋಕದಲ್ಲಿ ಯಾವ ಬಾಲೆಯು ತನ್ನಿಷ್ಟದಂತೆ ಯೋಗ್ಯಪತಿಯನ್ನು ಪಡೆಯು

ಪಳೋ ಅವಳೇ ಧನ್ಯಳು. ಅನುರೂಪನಾದ ಪತಿ ದೊರೆಯದಿದ್ದರೆ ಹೆಣ್ಣು ಮಕ್ಕಳ ಪ್ರಪಂಚದ ಗೋಳಾಟವನ್ನೇನು ಹೇಳಬೇಕು? ವಿವಾಹವು ಹೆಣ್ಣು ಮಕ್ಕಳಿಗೆ ಪುನರ್ಜನ್ಮದಾಯಕವಾಗಿರುವುದು. ಅವರ ಆ ದ್ವಿತೀಯಜನ್ಮ ಕಾಲದಲ್ಲಿ ಅನುರೂಪನಾದ ಪತಿ ದೊರೆತುಬಿಟ್ಟರೆ ಅವರ ಆಯುಷ್ಯವೆಲ್ಲಾ ಆನಂದದಿಂದ ಹೋಗುವುದು; ಇಲ್ಲವಾದರೆ ಅವರು ಈ ಲೋಕದಲ್ಲಿಯೇ ಪ್ರತ್ಯಕ್ಷ ನರಕವನ್ನು ಅನುಭವಿಸಬೇಕಾಗುವುದು. ಹಡೆದ ತಾಯ್ತಂದೆ ಗಳು ಈ ಮಾತನ್ನು ನೆನಪಿನಲ್ಲಿಟ್ಟಿರಬೇಕು. ತಾವು ಮಾಡುವಷ್ಟನೆಲ್ಲಾ ಮಾಡಿ ಕೊನೆಗೆ ಅವಳ ಹಣೆಯಲ್ಲಿದ್ದುದು ಆಯಿತು, ನಾವೇನು ಮಾಡಬೇಕು? ಎಂದು ಕೈಕೊಡೆಯುವ ತಾಯ್ತಂದೆಗಳು ಎಲ್ಲೆಲ್ಲಿಯೂ ಕಂಡುಬರುವರು. ಆದರೆ ಈ ಮಾತಿನಲ್ಲಿ ಅರ್ಥವಿಲ್ಲ. ಅನುರೂಪನಾದ ಪತಿಯೆಂದರೆ ಶ್ರೀಮಂತ ನೆಂದರ್ಥವಲ್ಲ, ಸುಸ್ವರೂಪಿಯೆಂದರ್ಥವಲ್ಲ. ಸತಿಯಾಗತಕ್ಕವಳ ನಿಜವಾದ ಪ್ರೇಮಕ್ಕೆ ಪಾತ್ರನಾದವನೇ ಅವಳಿಗೆ ಅನುರೂಪಪತಿ. ಅಸ್ಥಿರವಾದ ಶ್ರೀಮಂತಿಕೆಯೂ ತಾರುಣ್ಯದ ಭರದಲ್ಲಿ ತೋರಿಯಡಗುವ ಸೌಂದರ್ಯವೂ ಪ್ರಪಂಚದಲ್ಲಿ ನಿಜವಾದ ಸುಖವನ್ನಂತೂ ಉಂಟುಮಾಡಲಾರವು. ಪತಿ ಪತ್ನಿಯರ ಅಂತರಂಗದ ಐಕ್ಯದಿಂದಲೇ ಈ ಪ್ರಪಂಚದಲ್ಲಿ ನಿಜವಾದ ಸುಖ ವುಂಟಾಗುವುದು. ಧನ್ಯ! ತಾಯೀ ನೀನಿಂದು ಧನ್ಯಳಾದೆ।" ಎಂದಳು.

ಸತಿಯು ದಾಸಿಯ ಈ ಮಾತುಗಳನ್ನು ಕೇಳಿ ಆನಂದದಿಂದ ಅವಳನ್ನು ಅಪ್ಪಿಕೊಂಡಳು. ಅಷ್ಟರಲ್ಲಿ ರಾಣಿಯು ಅಲ್ಲಿಗೆ ಬಂದು ', ಓಹೋ, ವಿರಕ್ತೇ, ನೀನಾಗಲೇ ಬಂದು ಸತಿಗೆ ಎಲ್ಲ ವಿಚಾರಗಳನ್ನೂ ಹೇಳಿಬಿಟ್ಟಂತೆ ಕಾಣು ತ್ತಿದೆ. ಸತೀ, ಏನಮ್ಮಾ। ಕೈಲಾಸಪತಿಯು ನಿನಗೆ ಅನುರೂಪನಾದ ಪತಿ ಯೆಂದು ನಾವೆಲ್ಲರೂ ನಿರ್ಣಯಿಸಿದೆವು. ಏನು ಹೇಳುವೆ?" ಎಂದು ಮುಗುಳ್ನಗೆ ನಕ್ಕು ಕೇಳಿದಳು.

ಸತಿಯು ಮಿತಭಾಷಿಣಿಯಾಗಿದ್ದರೂ ತಾಯಿಯೊಡನೆ ಮಾತ್ರ ಮನಸ್ಸು ಬಿಚ್ಚಿ ಮಾತಾಡುವಳು. ಆಕೆಯು "ಮದುವೆ ಮಾಡತಕ್ಕವರು ನೋಡಿಕೊಂಡರಾಯಿತು; ನನ್ನನ್ನೇಕೆ ಪುನಃ ಕೇಳುವುದು?" ಎಂದಳು.

ಸತಿಯ ಮಾತಿನಲ್ಲಿ ಎರಡರ್ಥವಿದ್ದಿತು. "ನನ್ನನ್ನೇಕೆ ಪುನಃ ಕೇಳು ವುದು" ಎಂಬುದು ಮುಖ್ಯಾರ್ಥಸೂಚಕವಾಗಿದ್ದಿತು. ತಾಯಿಯು ಇದ

ಸ್ಸರಿತು “ ಸತೀ, ಇದನ್ನೇನು ಹೇಳುವೆ ? ಮದುವೆಯನ್ನು ಮಾಡತಕ್ಕ ವರು ನಾವೇ ಆದರೂ ಅದರ ಪರಿಣಾಮವನ್ನು ಅನುಭವಿಸತಕ್ಕವಳು ನೀನು. ಆದುದರಿಂದಲೇ ನಿನ್ನ ಅನುಮತಿಯನ್ನು ಕೇಳಬೇಕಾಯಿತು. ತಾಯ್ತಂದೆಗಳು ಮಕ್ಕಳ ಅನುಮತಿಯನ್ನು ಕೇಳದೆ ಮದುವೆಯನ್ನು ಮಾಡುವುದು ಸರ್ವಥಾ ಸರಿಯಲ್ಲ. ತಟ್ಟನೆ ಹೇಳಿಬಿಡು. ನಾರದರು ಕೈಲಾಸಕ್ಕೆ ಹೋಗಲು ಹೊರಟಿರುವರು. ನಿನ್ನ ಅನುಮೋದನೆಯನ್ನು ಪಡೆದುಕೊಳ್ಳಲು ನಿಂತಿದ್ದಾರೆ. ಅವರಿಗೆ ನಿರ್ಣಯವನ್ನು ಹೇಳಬೇಕಾಗಿರು ವುದು. ” ಎಂದು ಮಂದಹಾಸದೊಡನೆ ನುಡಿದಳು.

ತಾಯಿಯ ಈ ಒಗಟಿಗೆ ತಕ್ಕ ಉತ್ತರವನ್ನು ಸ್ಪಷ್ಟವಾಗಿ ಹೇಳಿಬಿಡ ಬೇಕೆಂದು ಸತಿಯು ಆಲೋಚಿಸಿದಳು. ಮತ್ತೊಮ್ಮೆ ವಿಚಾರಮಾಡಿ “ ಮಾಡುವುದನ್ನೆಲ್ಲಾ ಮಾಡಿ ಈಗ ಉಪಚಾರಕ್ಕಾಗಿ ನನ್ನನ್ನು ಕೇಳುವುದು ಬೇಡ. ನೀವು ಈಗ ಮಾಡಿದ ವಿಚಾರವನ್ನೇ ಕೊನೆಯವರೆಗೂ ನಡೆಯಿಸ ಬೇಕು. ನಿಮಗೆ ನನ್ನ ಒಪ್ಪಿಗೆ ಮುಖ್ಯವಾಗಿದ್ದರೆ ಯಾವುದನ್ನೂ ಮೊದಲೇ ಏಕೆ ಕೇಳಲಿಲ್ಲ ? ಈಗೇಕೆ ಕೇಳುವಿರಿ ? ” ಎಂದಳು. ಸತಿಯು ಆಡಿದ ಮಾತಿನಲ್ಲಿ ವ್ಯಂಗ್ಯಾರ್ಥವಿದ್ದರೂ ಆವಳ ಮುಖಲಕ್ಷಣದಿಂದ ಆ ವ್ಯಂಗ್ಯಾರ್ಥದಲ್ಲಿ ಯಾವುದನ್ನು ಗ್ರಹಿಸಬೇಕೆಂಬುದು ತಾಯಿಗೆ ತಿಳಿಯದಿರಲಿಲ್ಲ. ಅವಳು “ ಒಳ್ಳೆಯದಮ್ಮಾ! ಹಾಗೆಯೇ ಮಾಡುವೆವು.” ಎಂದು ನುಡಿದು ಹೊರಟು ಹೋದಳು. ಪೌರೋಹಿತ್ಯಾಚಾರವನ್ನು ಕೈಕೊಂಡ ನಾರದರು ಕೈಲಾಸ ಗಿರಿಗೆ ಹೋಗಿ ಶಂಕರನ ಅನುಮತಿಯನ್ನು ಪಡೆದುಕೊಂಡ ಸಂಗತಿಯನ್ನು ದಕ್ಷಪುರರಿಗೆ ತಿಳಿಸಿದರು. ವಿವಾಹವು ಈಗ ನಿಜವಾಗಿ ನಿರ್ಣಯವಾದಂ ತಾಯಿತು.

ದಕ್ಷರಾಜನು ಮಹಾ ವೈಭವದೊಡನೆ ಸತಿಯ ವಿವಾಹಸಮಾ ರಂಭದ ಸಿದ್ಧತೆಯನ್ನು ಮಾಡತೊಡಗಿದನು. ಅರಮನೆಯೂ ದಕ್ಷಪುರಿಯೂ ಪರಿಪರಿಯ ಗುಡಿತೋರಣಗಳಿಂದ ಅಲಂಕರಿಸಲ್ಪಟ್ಟುವು. ಸಕಲ ದೇಶ ಗಳಿಗೂ ಆಮಂತ್ರಣ ಪತ್ರಿಕೆಗಳನ್ನು ಕಳುಹಿದರು. ಸಕಲ ದೇವತೆಗಳೂ ಸತಿಯ ವಿವಾಹಕ್ಕೆ ಆಮಂತ್ರಿತರಾದರು. ದಕ್ಷರಾಜನು ಮೊದಲು ಇಪ್ಪ ತ್ತೇಳು ಮಕ್ಕಳ ಮದುವೆಯನ್ನು ಮಾಡಿದ್ದನು. ಆದರೆ ಯಾವ ಮದು

ವೇಗೂ ಇಷ್ಟೊಂದು ಸಿದ್ಧತೆಯನ್ನು ಮಾಡಿರಲಿಲ್ಲ. ಸತಿಯು ಅವನ ಮೋಹದ ಮಣಿ. ಆದುದರಿಂದಲೇ ಅವಳ ಮದುವೆಯನ್ನು ಇಷ್ಟೊಂದು ವೈಭವದಿಂದ ಮಾಡಲು ತೊಡಗಿದ್ದನು. ವರನು ಕೈಲಾಸಪತಿ. ನಾರದರ ಹೇಳಿಕೆಯಿಂದ ವರಪಕ್ಷದವರ ಸಂಪತ್ತು ಅತ್ಯಧಿಕವಾಗಿದ್ದಿತು. ವರಪಕ್ಷದವರ ಐಶ್ವರ್ಯ ಸಮಾರಂಭಗಳಿಗಿಂತಲೂ ತಮ್ಮದೇ ಹೆಚ್ಚಿನವಾಗಬೇಕೆಂಬುದು ದಕ್ಷರಾಜನ ಅಭಿಪ್ರಾಯ. ದಕ್ಷನು ಸಕಲ ಕಾರ್ಯಗಳಲ್ಲಿಯೂ ದಕ್ಷನೇ ಸರಿ. ಆದು ದರಿಂದಲೇ ಅವನಿಗೆ ತನ್ನ ಸಿರಿಸಂಪತ್ತು, ಅಧಿಕಾರ ವೈಭವ, ಇವುಗಳ ವಿಷಯದಲ್ಲಿ ಒಂದು ಬಗೆಯ ಅಹಂಭಾವವೂ ಇದ್ದಿತು. ತಾನೇ ಶ್ರೇಷ್ಠ; ತನಗೆ ಸೇರಿದವರೂ ಶ್ರೇಷ್ಠರು, ಎಂಬೀ ವಿಧದ ವಿಚಾರತರಂಗಗಳು ಅವನ ಅಂತರಂಗವನ್ನು ಸದಾವ್ಯಾಪಿಸಿರುತ್ತಿದ್ದುವು. ಆ ಅಹಂಭಾವಕ್ಕೆ ಅಲ್ಪ ಆಘಾತವಾದರೂ ಅವನಿಗೆ ಸಹನೆಯಾಗದು.

ಸತಿಯ ವಿವಾಹವಾಗಬೇಕೆಂದು ನಿರ್ಣಯವಾದ ದಿನ ದಕ್ಷಪುರಿ ಯಲ್ಲಿ ಜನರೆಲ್ಲರೂ ಆನಂದದಿಂದ ಉನ್ಮತ್ತರಾಗಿದ್ದರು. ಅವರಿಗೆ ಇಂದು ಮಾತಾಡಲು ಅವಕಾಶವಿರಲಿಲ್ಲ. ಹೊಸ ಹೊಸ ಉಡುಗೆತೊಡುಗೆಗಳನ್ನು ಧರಿಸಿಕೊಂಡಿದ್ದರು. ಕೈಲಾಸಪುರಿಯ ಬೀಗರು ಬರುವರು; ಅವರ ಮುಂದೆ ತಮ್ಮ ವೈಭವವನ್ನು ತೋರಿಸಬೇಕು, ಎಂದು ದಕ್ಷಪುರಿಯ ಪ್ರಜೆಗಳು ತಮ್ಮ ಸಂಪತ್ತನ್ನೆಲ್ಲಾ ಕಲೆಹಾಕಿ ಮೈಮೇಲೆ ಮುಚ್ಚಿಕೊಂಡಿದ್ದರು. ಹೊಸಹೊಸ ಅಲಂಕಾರಗಳಿಂದ ಹೆಂಗುಸರ ಮೈಯೆಲ್ಲ ಮುಚ್ಚಿಹೋಗಿ ದ್ದುವು. ದಕ್ಷರಾಜನ ಹೆಣ್ಣುಮಕ್ಕಳೂ ಅಳಿಯಂದಿರೂ ಸತಿಯ ವಿವಾಹ ಕ್ಕೆಂದು ಬಂದಿದ್ದರು. ಅವರ ಸಂಪತ್ತು ಒಬ್ಬರಿಂದೊಬ್ಬರದು ಮಿಗಿಲಾಗಿ ದ್ದಿತು. ಸತಿಯ ಅಕ್ಕತಂಗಿಯರೂ ಬಗೆಬಗೆಯ ವಸ್ತ್ರಾಲಂಕಾರಗಳನ್ನು ಧರಿಸಿ ಆನಂದದಿಂದ ವರಪಕ್ಷದ ನಿಬ್ಬಣವನ್ನು ನಿರೀಕ್ಷಿಸುತ್ತಿದ್ದರು. ಪುರಜನರೆ ಲ್ಲರೂ ಬೀಗರ ಆಗಮನವನ್ನೇ ಇದಿರು ನೋಡುತ್ತಿದ್ದರು.

ವಿವಾಹಕ್ಕೆಂದು ಆಮಂತ್ರಿತರಾದ ಸಕಲರೂ ಬಂದಿದ್ದರು. ದೇವಾಧಿ ದೇವ ಮಹಾದೇವನಿಗೆ ಆದಿಮಾಯೆಯ ಅವತಾರವಾದ ಸತೀದೇವಿಯನ್ನು ಕೊಟ್ಟು ದಕ್ಷಪುರಿಯಲ್ಲಿ ವಿವಾಹವಾಗುವುದೆಂದು ಕೇಳಿ ಸಕಲ ದೇವತೆ ಗಳೂ ಇಂದ್ರ, ಚಂದ್ರ, ಅರುಣ, ವರುಣ, ಬ್ರಹ್ಮ, ವಿಷ್ಣು, ಯಕ್ಷ, ಗಂಧರ್ವ,

ಕಿನ್ನರ ಇವರೇ ಮೊದಲಾದ ಸಕಲರೂ ಇಂದು ದಕ್ಷಪುರಿಯಲ್ಲಿ ನೆರೆದಿದ್ದರು. ಸರ್ವರಿಗೂ ಚಿರಪರಿಚಿತರಾದ ನಾರದರು ಅವರವರ ಯೋಗ್ಯತಾನುಸಾರ ಆದರೋಪಚಾರ ಮಾಡುತ್ತಿದ್ದರು. ಊಟಮಾಡಲಿಕ್ಕೂ ಅವರಿಗೆ ಅವಕಾಶವಿಲ್ಲ.

ನಿಯಮಿತ ವೇಳೆಗೆ ಸರಿಯಾಗಿ ಕೈಲಾಸಪುರಿಯಿಂದ ವರಪಕ್ಷದವರ ನಿಬ್ಬಣವು ಬಂದಿತು. ವರನ ಬಳಗದವರ ವೇಷಭೂಷಣಗಳನ್ನೂ ಸ್ವತಃ ವರನ ವಸ್ತ್ರಾಲಂಕಾರಗಳನ್ನೂ ನೋಡಿದೊಡನೆಯೇ ಪುರಜನರ ಮನಸ್ಸಿನಲ್ಲಿ ಬೇರೊಂದು ಭಾವನೆ ಉದಯವಾಯಿತು. ಅವರೆಲ್ಲರೂ ಎಷ್ಟು ಹೊತ್ತಿಗೆ ನಿಬ್ಬಣವು ಬರುವುದೋ, ಯಾವಾಗ ನಾವು ನಿಬ್ಬಣದವರನ್ನು ಕಣ್ಣಾರೆ ನೋಡಿ ಆನಂದ ಪಡುವೆವೋ ಎಂದು ಆತುರರಾಗಿದ್ದರು. ನಿಬ್ಬಣದವರ ಸ್ವಾಭಾವಿಕವಾದ ರೂಪಗುಣ ನಿಜವಾದ ಸಂಪತ್ತು ಇವುಗಳ ಕಡೆಗೆ ಯಾರದೂ ಲಕ್ಷ್ಯವಿರಲಿಲ್ಲ. ಅವರ ಬಾಹ್ಯಾಡಂಬರದ ಕಡೆಗೇ ಎಲ್ಲರೂ ಉತ್ಸುಕದೃಷ್ಟಿಯುಳ್ಳವರಾಗಿದ್ದರು. ಆದುದರಿಂದ ಅವರಿಗೆ ಅಸಮಾಧಾನವಾಯಿತೆಂಬುದು ಅವರ ಮುಖಲಕ್ಷಣದಿಂದಲೇ ಕಂಡುಬಂದಿತು. ವಿವಾಹದ ಔಪಚಾರಿಕಕ್ರಮಗಳೆಲ್ಲವೂ ಶುಭಮುಹೂರ್ತದಲ್ಲಿ ಯಥಾರೀತಿ ಸಾಂಗವಾದುವು. ಆದರೆ ಸತಿಯ ಹೊರತಾಗಿ ಕನ್ಯಾಪಕ್ಷದವರಲ್ಲಿ ಒಬ್ಬರ ಮುಖದಮೇಲೆಯೂ ಶುಭ್ರವಾದ ಆನಂದದ ಲಕ್ಷಣವಿರಲಿಲ್ಲ. ಕಾರಣವೇನು?

ನಾರದರು ವರನ ವಿಷಯವಾಗಿ ಹೇಳಿದ ಮಾತುಗಳೆಲ್ಲವೂ ನಿಜವಾಗಿದ್ದುವು. ಪೂರ್ಣಚಂದ್ರನನ್ನು ಹೋಲುವ ಶಂಕರನ ಮುಖವನ್ನೂ ಬೆಳ್ಳಿಯಂತೆ ಬಿಳಿದಾದ ಆ ದೇಹವನ್ನೂ ಆನಂದವೃತ್ತಿಯನ್ನೂ ನೋಡಿ ರಾಜಕುಟುಂಬದವರೆಲ್ಲರೂ ಬೆರಗಾದರು. ಅತ್ತೆಗಂತೂ ಅಳಿಯನನ್ನು ನೋಡಿ ಪರಮಾನಂದವಾಯಿತು. ಪುರಜನರೆಲ್ಲರೂ ಸತಿಗೆ ತಕ್ಕ ಪತಿಯೆಂದು ಏಕಕಂಠದಿಂದ ನುಡಿದರು. ಆದರೆ ಒಂದು ಮಾತಿನಲ್ಲಿ ಮಾತ್ರ ಅವರೆಲ್ಲರಿಗೂ ಬಹಳ ಅಸಮಾಧಾನ. ನಾರದರು ವರ್ಣಿಸಿದ ವರನ ಐಶ್ವರ್ಯದ ವಿಚಾರವು ಅವರಿಗೆ ಸುಳ್ಳೆಂದು ತೋರಿತು. ಧನಾಧಿಪತಿ ಕುಬೇರನು ವರನ ಮಿತ್ರನಾಗಿದ್ದನಂತೆ; ಆದರೆ ಅದರಿಂದ ಪ್ರಯೋಜನವೇನೂ ಆಗಲಿಲ್ಲ. ವಿವಾಹದ ದಿನದಲ್ಲಿಯೂ ವರನ ಕೊರಳಲ್ಲಿ ಒಂದೆರಡು ರುದ್ರಾಕ್ಷಿಮಾಲೆ

ಗಳು; ಮೈಗೆಲ್ಲಾ ಬೂದಿ; ಉಡುವುದಕ್ಕೆ ಹುಲಿದೊಗಲು ! ಅದು ಹೇಗೂ ಇರಲಿ. ಮದುಮಗಳಿಗಾದರೂ ನಾಲ್ಕು ಬಂಗಾರದ ನಗನಟ್ಟುಗಳನ್ನು ತರಬಾರದೇ ? ಅವಳಿಗೂ ಇಂಥವೇ ವಸ್ತ್ರಾಲಂಕಾರಗಳು ! ಅರಸಿಗೆ ಬಹು ಪಶ್ಚಾತ್ತಾಪವಾಯಿತು. ಅವಳು:-“ ಇದೇನು ? ನಾರದರು ನಮ್ಮನ್ನು ವಂಚಿಸಿಬಿಟ್ಟರು ? ಇವನೇ ಶಿವನು ಅಹುದೇನು ? ನನ್ನ ಮಗಳು ಲಗ್ನ ದಲ್ಲಿಯೂ ನಾಲ್ಕು ನಗನಟ್ಟುಗಳನ್ನು ಕಾಣಲಿಲ್ಲವಲ್ಲ! ಏನು ಇದ್ದರೆ ಏನಾ ಯಿತು. ಅಳಿಯನ ಮನೆಯು ಜ್ಯೇಷ್ಠಾಲಕ್ಷ್ಮಿಯ....” ಎಂದು ಚಿಂತಿಸಿದಳು. ಕೂಡಿದ ಹೆಣ್ಣುಮಕ್ಕಳಲ್ಲಿ ಕೆಲವರು “ ಇದೇನೇ ? ಅಳಿಯ! ಶುದ್ಧ ಬೈರಾಗಿ! ಜಡೆಯೇನು ? ಬೂದಿಯೇನು ? ರುದ್ರಾಕ್ಷಮಾಲೆಯೇನು? ಹುಲಿದೊಗ ಲೇನು ? ಪಿಶ್ ! ” ಎಂದು ಪರಿಹಾಸಗೈದರು. ಮತ್ತೆ ಕೆಲವು ಅದೃಷ್ಟ ವಾದಿನಿಯರಾದ ಮುದುಕಿಯರು, “ ಮೂಳ! ಇವನೆಂತಹ ವರನೇ ? ನಾರ ದರು ಅಷ್ಟು ಉದ್ದ ಇಷ್ಟು ಗಡುತರವೆಂದು ಹೇಳಿ ಇಂತಹ ಬೈರಾಗಿಗೆ ನಮ್ಮ ಮುದ್ದು ಮಗು ಸತಿಯನ್ನು ಒಯ್ದು ಕಟ್ಟಿದರು. ಅಳಿಯನದು ಅರಸುಮನೆತನವಂತೆ! ಕೈಲಾಸಪತಿಯಂತಮ್ಮಾ! ಯಾವುದಕ್ಕೇನು ಕೊರತೆ ಇದ್ದೀತು! ಆದರೆ ಇನ್ನೊಂದು ಮಾತು. ಒಬ್ಬೊಬ್ಬರೂ ಪಡೆದುದನ್ನೇ ಉಣ್ಣುವರಲ್ಲದೆ ದುಡಿದುದನ್ನು ಉಣ್ಣಲಾರರು. ಅವಳ ಅದೃಷ್ಟದಲ್ಲಿಯೇ ಇಲ್ಲದ ಮಾತು ಎಲ್ಲಿಂದ ಬಂದೀತು. ಸತಿಯ ದೈವ (ಅದೃಷ್ಟ) ವೇ ಅಂತ ಹದು. ” ಎಂದು ತಮ್ಮತಮ್ಮೊಳಗೆ ಗುಣುಗುಣು ಮಾತಾಡಿದರು. ಸತಿಯ ತಾಯಿಗೆ ಇದೆಲ್ಲಾ ತಿಳಿಯಿತು, ಸರಿ. ಆದರೆ ಮಾಡುವಳೇನು ? ಅವಳ ಮನಸ್ಸಿಗೆ ಅಳಿಯನ ಬಡತನದ್ದೊಂದು ಚಿಂತೆಯೆ ಹತ್ತಿತು. ಅವಳು ಮುಂದಾಗಿ ಬಂದು ಗೊತ್ತುಮಾಡಿದ ನಾರದರನ್ನು ಒಂದು ಮಾತು ಕೇಳೋಣವೆಂದು ಸುಮ್ಮನಾದಳು.

ಮೂರನೆಯ ದಿನ ಅರಸಿಯು ನಾರದರನ್ನು ಕಂಡು, “ ನಾರದರೇ, ವರನ ಐಶ್ವರ್ಯವನ್ನು ಬಾಯಿ ಹಿಡಿಯದಂತೆ ಬಣ್ಣಿಸಿದಿರಲ್ಲ ! ಅದರಂತೆ ಎಲ್ಲಿ ಏನಿದೆ ? ನಮ್ಮ ಸತಿಯು ಲಗ್ನದಲ್ಲಿಯೂ ನಾಲ್ಕು ಒಡವೆಗಳನ್ನು ಕಾಣಲಿಲ್ಲ! ” ಎಂದಳು. ಅವಳ ದುಃಖವು ಉಕ್ಕಿ ಬಂದಿತು.

ನಾರದ:— ದೇವೀ, ನಾನು ಹೇಳಿದ ಮಾತು ಸುಳ್ಳಲ್ಲ. ಸತಿಯು

ನಿಜವಾಗಿಯೂ ರಾಜರಾಜೇಶ್ವರಿಯಾಗುವಳು. ನಾನು ಈಗ ಏನೂ ಹೇಳ ಲಾರೆ. ಅವಳು ತನ್ನ ಮನೆಯಲ್ಲಿ ಹೋಗಿ ಇದ್ದ ಬಳಿಕ ಅಳಿಯನ ಸಂಪ ತ್ತನ್ನೂ ಮಗಳ ಸುಖಸಮಾಧಾನಗಳನ್ನೂ ನೀವೇ ಕಣ್ಣಾರೆ ಕಾಣುವಿರಿ.

ನಾರದರು ಈ ರೀತಿ ಅರಸಿಯನ್ನೂ ಒಳಗದವರನ್ನೂ ಸ್ವಲ್ಪ ಸಮಾ ಧಾನಪಡಿಸಿದರು. ಆದರೆ ಮತ್ತೊಂದು ಅನರ್ಥವು ಸಂಭವಿಸಿತು. ವರನ ವಿವಾಹಕಾಲದ ವೇಷಭೂಷಣಗಳನ್ನೂ ದಿಬ್ಬಣದ ಜನರ ನಡೆನುಡಿಗಳನ್ನೂ ನೋಡಿ ದಕ್ಷಮಹಾರಾಜನಿಗೆ ಬಲು ನಾಚಿಕೆಯಾಯಿತು. ಅವನ ಉಳಿದ ಅಳಿಯಂದಿರಲ್ಲಿ ಒಬ್ಬನು ಆನೆಯ ಮೇಲೆ, ಇನ್ನೊಬ್ಬನು ಕುದುರೆಯ ಮೇಲೆ, ಮತ್ತೊಬ್ಬನು ರಥದ ಮೇಲೆ ಇಂತು ಮಹಾ ವೈಭವದಿಂದ ಮದುವೆಗೆ ಬಂದಿದ್ದರು. ಆದರೆ ಸತಿಯ ಪತಿಯಾಗುವ ಹೊಸ ಅಳಿಯನ ವಾಹನವು ದೊಡ್ಡದೊಂದು ಮುದಿಯೆತ್ತು! ಉಳಿದ ಅಳಿಯಂದಿರ ಸಂಗಡ ಬೆಳ್ಳೊಡೆ-ಬೆಳ್ಳಿಯ ಚಿತ್ರಗಳನ್ನು ಹಿಡಿಯುವ ಅನೇಕ ವಸ್ತ್ರಾಲಂಕಾರಭೂಷಿತರಾದ ಸೇವಕರಿದ್ದರು. ಆದರೆ ಇವನೊಡನೆ ತ್ರಿಶೂಲವನ್ನೋಡಮರುಗವನ್ನೋ ಹಿಡಿದ ವಿಕೃತಮುಖದ ಸೇವಕರು. ದಿಬ್ಬಣದ ಜನರ ಆ ವಿಕಟರೂಪಗಳನ್ನು ನೋಡಿ ದಕ್ಷರಾಜನಿಗೆ ಬಲು ಬೇಸರಬಂದಿತು; ತಿರಸ್ಕಾರವುಂಟಾಯಿತು: ಕೋಪವೂ ಬಂದಿತು. ಅವನ "ತಾನೇ ಶ್ರೇಷ್ಠ, ತನ್ನವರೇ ಶ್ರೇಷ್ಠರು" ಎಂಬ ಅಹಂಭಾವಕ್ಕೆ ಈ ಅಳಿಯನ ಸ್ಥಿತಿಗತಿಗಳಿಂದ ಭಂಗವುಂಟಾಯಿತು. ಇನ್ನು ಜೀವವಿರುವವರೆಗೂ ಈ ಅಳಿಯನನ್ನೂ ಅಳಿಯನ ಒಳಗದವರನ್ನೂ ನನ್ನ ಅರಮನೆಗೆ ಕರೆಯೆನೆಂದು ಪ್ರತಿಜ್ಞೆ ಮಾಡಿದನು. ಇನ್ನು ಸತಿಯ ವಿಚಾರ; ಒಮ್ಮೆ ಅವಳನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡು ಬಿಡ ಬೇಕೆಂದು ಆಲೋಚಿಸಿದನು. ಆದರೆ ಮಗಳು ಈ ಮಾತನ್ನು ಎಂದೂ ಕೇಳ ಲಾರಳೆಂದು ತೋರಿದಬಳಿಕ, ಹೋಗಲಿ! ಕೊಟ್ಟ ಹೆಣ್ಣು ಕುಲದಿಂದ ಹೊರಗೆ. ಅವಳ ಅದೃಷ್ಟದಲ್ಲಿಯೇ ಹೀಗಿದ್ದಿತು. ನಾವಾದರೂ ಏನು ಮಾಡು ವೆವು. ನೋಡಿ ನೋಡಿ ಕಡೆಗೆ ಈ ಗತಿಯಾಯಿತು. ದುರ್ದೈವಿಗಳಿಗೆ ಕೊಟ್ಟು ಸುಖಪಡಿಸಿದವರಿಲ್ಲ. ಅದೃಷ್ಟವಂತರಿಗೆ ಕೊಡದೆ ಕಷ್ಟಕೊಟ್ಟವ ರಿಲ್ಲ. ನಾನೇನು ಮಾಡಲಿ! ಆ ಜೋಗಿಗೂ ಈ ಜೋಗಿಣಿಗೂ ಗಂಟು.

ಅವರು ನಮ್ಮ ಮನೆಗೆ ಮಾತ್ರ ಬಾರದಿದ್ದರೆ ತೀರಿತು. ಎಂದು ಬಹು ಅನಾದರದೊಡನೆ ಆಲೋಚಿಸಿದನು.

ವರನ ವಿಷಯವಾಗಿ ಅತ್ತೆಯ ಮಾವನ, ಬಳಗದ, ಪುರಜನರ ಭಾವನೆ ಏನಾದರೇನು ? ನಮ್ಮ ಮದುಮಗಳ ಭಾವವು ಯಾವ ಪ್ರಕಾರವಾಯಿತೆಂಬುದನ್ನು ನೋಡುವ. ಇದುವರೆಗೆ ತನ್ನ ಅಕ್ಕ ಯೋಗಿನಿಯ ಮುಖದಿಂದ ಯಾವಾತನ ಗುಣವರ್ಣನೆಯನ್ನು ಕೇಳಿ ಪ್ರೀತಿಯಿಂದ ಯಾವಾತನು ತನ್ನ ಇಷ್ಟದೇವತೆಯೆಂದು ಹಗಲಿರುಳೂ ಭಕ್ತಿಯಿಂದ ಪೂಜಿಸುತ್ತಿದ್ದಳೋ ಯಾವಾತನ ಪ್ರಾಪ್ತಿಗಾಗಿ ವ್ರತೋಪವಾಸಗಳಿಂದ ಶರೀರವನ್ನು ಕೊರಗಿಸಿದ್ದಳೋ ಆತನು ಪತಿಯಾಗಿ ಬಂದು ಇದಿರಿಗೆ ನಿಂತಿರಲು ಸತಿಗೆ ಆದ ನಿಷ್ಪಾನಂದವನ್ನು ಏನೆಂದು ಹೇಳೋಣ ? ಅದಕ್ಕೆ ಆನಂದ ಪರಮಾನಂದ ಬ್ರಹ್ಮಾನಂದ ಇತ್ಯಾದಿ ಯಾವ ಶಬ್ದವೂ ಅನ್ವರ್ಥಕವಾಗಲಾರದು. ಸತಿಯ ಗೆಳತಿಯರೇ ಆ ಮನೋಭಾವನೆಯ ರಹಸ್ಯವನ್ನು ತಿಳಿದುಕೊಳ್ಳಬೇಕು. ಸತಿಯು ಪತಿದೇವನನ್ನು ಕಣ್ತುಂಬ ನೋಡಿ ತನ್ನನ್ನು ಕೈಲಾಸಪತಿಯ ಚರಣಾರವಿಂದಗಳಲ್ಲಿ ಭಕ್ತಿಯಿಂದ ಅರ್ಪಿಸಿದಳು. ಪತಿಯ ಪ್ರಸನ್ನ ಮುಖವೂ ರಜತಗಿರಿಯಂತಹ ದೇಹವೂ ವಿಶಾಲ-ವಕ್ಷಸ್ಥಲವೂ ಕೂರ್ಮದಂತಿರುವ ಪಾದಗಳೂ ಸತಿಯ ಮನದಲ್ಲಿ ನೆಲೆಗೊಂಡುವು. ಆಕೆ ಮನಸ್ಸಿನಲ್ಲಿ " ಹೇ ! ಪ್ರಭುವೇ ! ಸತಿಯ ಪ್ರಭುವೇ ! ಸತಿಯ ಜನ್ಮವು ನಿಮಗಾಗಿಯೇ ಮೀಸಲಾಗಿರುವುದು. ನಿಮ್ಮ ಸಹಧರ್ಮಿಣಿಯನ್ನು ಮಾಡಿದುದು ನನ್ನ ಪುಣ್ಯದ ಫಲವೇ ಸರಿ. ನಾನಿಂದು ಧನ್ಯಳಾದೆನು. " ಎಂದು ಆನಂದಪಟ್ಟಳು.

ಈ ರೀತಿ ಸತಿಗೆ ಆನಂದವಾಗಿದ್ದರೂ ಅವಳ ತಾಯ್ತಂದೆಗಳಿಗೆ ಮಾತ್ರ ಈ ವಿವಾಹವು ಹಿತಕರವಾಗಿ ತೋರಲಿಲ್ಲ. ದಕ್ಷರಾಜನ ಮುಖದಲ್ಲಿ ನಾಚಿಕೆ ಅನಾದರ, ಅಪ್ರೀತಿ, ಕೊನೆಗೆ ಕಡು ವೈರ ಇವು ಒಡೆದು ತೋರಿದುವು. ಇದನ್ನು ನೋಡಿ ದಕ್ಷನ ತಂದೆಯಾದ ಬ್ರಹ್ಮನಿಗೆ ದುಃಖವಾಯಿತು. ಅವನು ಮಗನೊಡನೆ ಈ ಮಾತನ್ನು ಬಿಡಿಸಿ ಕೇಳಿದನು. ದಕ್ಷನು ಮನದಲ್ಲಿ ಹತ್ತಿಕ್ಕಿಕೊಂಡಿದ್ದ ರೋಷಭಾವನೆಗೆ ಈಗ ಮಾರ್ಗವು ದೊರೆಯಿತು.



## ಆರನೆಯ ಪರಿಚ್ಛೇದ



# ಕೈಲಾಸವಾಸ





ಮಗನ ಅವಿವೇಕಕ್ಕಾಗಿ ನೊಂದುಕೊಂಡ ಬ್ರಹ್ಮದೇವನು ದಕ್ಷನ ಬಳಿಗೆ ಬಂದು 'ತಮ್ಮಾ, ಮಗಳ ಮದುವೆಯಂತಹ ಮಹಾ ಸಮಾರಂಭದಲ್ಲಿ ಹೀಗೇಕೆ ಅಸಂತುಷ್ಟನಾಗಿರುವೆ ?' ಎಂದು ಕೇಳಿದನು. ದಕ್ಷನು ಮನಸ್ಸಿನಲ್ಲಿ ಹತ್ತಿಕ್ಕಿಕೊಂಡಿದ್ದ ರೋಷ ಭಾವನೆಗೆ ಈಗ ಮಾರ್ಗವು ದೊರೆಯಿತು.

"ನಾರದ! ಎಲ್ಲವನ್ನೂ ಮಾಡಿದವನು ನಾರದನು! ಆತನ ತಂಬೂರಿಯನ್ನು ಒಡೆದು ಹಾಕುತ್ತೇನೆ! ಇಂತಹ ತಿರುಕನೊಡನೆ ಸಂಬಂಧ ಬಳೆಯಿಸಿ ನಮ್ಮ ಮನೆತನದ ಗೌರವನ್ನು ಕಳೆದುಬಿಟ್ಟನು. ನಮಗೆ ಅನುರೂಪವಾದ ಬಾಂಧವ್ಯವು ಕೂಡಿಬರದಿದ್ದರೆ ನಮ್ಮ ಸತಿಯು ನಮ್ಮಲ್ಲಿಯೇ ಉಳಿಯುತ್ತಿದ್ದಳು. ನೋಡಿದಿರಾ! ವರನ ವೇಷವೇನು? ಭೂಷಣಗಳೇನು? ಪರಿವಾರವೇನು ? ಮಗಳ ಮೇಲಿನ ಮಮತೆಯನ್ನು ಇಂದೇ ಮರೆತುಬಿಟ್ಟೆನು. ಅವಳಾಯಿತು. ಆ ಜೋಗಿಯಾಯಿತು. ಹೋಗಲಿ!" ಎಂದನು.

**ಬ್ರಹ್ಮ:—** ಮಗೂ! ಹಾಗಲ್ಲ. ಆತನು ಜೋಗಿಯಲ್ಲ. ದೇವಾಧಿದೇವ ಮಹಾದೇವನು. ಜಗನ್ಮಾತೆಯಾದ ಸತಿಗೆ ಅನುರೂಪನಾದ ವರನು. ನಾರದನು ನಮ್ಮ ಕುಲಗೌರವಕ್ಕೆ ಕಲಂಕವನ್ನು ತರಲಿಲ್ಲ. ಅಳಿಯನೊಡನೆ ಪ್ರೀತಿಯಿಂದಿರು.

**ದಕ್ಷ:—** ಇರಲಿ. ಈ ಉಪದೇಶವು ಸಾಕು. ನಾನು ನನ್ನ ಮನಸ್ಸಿಗೆ ಬಂದಹಾಗೆ ನಡೆದುಕೊಳ್ಳುವೆನು. ಹೆಚ್ಚಿನ ಮಾತಿನಿಂದ ಫಲವೇನು ?

ಅಭಿಮಾನಾಂಧನಾದ ದಕ್ಷನಿಗೆ ಯಾರ ಉಪದೇಶದಿಂದಲೂ ಸಮಾಧಾನವಾಗಲಿಲ್ಲ. ಅವನು ಪತಿಗೃಹಕ್ಕೆ ತೆರಳುವ ಸತಿಗೆ ಆಶೀರ್ವಾದವನ್ನು

ಕೂಡ ಮಾಡಲಿಲ್ಲ, ಆಕೆಯು ಬಂದು ಭಕ್ತಿಯಿಂದ ನಮಸ್ಕಾರಮಾಡಲು ತಿರಸ್ಕಾರದೃಷ್ಟಿಯಿಂದ ನೋಡಿದನು; ಇಷ್ಟೇ. ಆದರೆ ಸತಿಯ ತಾಯಿಯು ಮಾತು ಬೇರೆಯಾಗಿದ್ದಿತು. ಮಾತೆಯ ಮಮತೆಯೇ ಬೇರೆ; ತಂದೆಯ ಮೋಹವೇ ಬೇರೆ. ಸತಿಯು ತಾಯಿಯ ಬಳಿಗೆ ಬಂದು ನಮಸ್ಕಾರಮಾಡಲು ಅವಳಿಗೆ ಬಹುದುಃಖವಾಯಿತು. ಪತಿಗೃಹದಲ್ಲಿ ಮಗಳು ಸಹಿಸಬೇಕಾಗಿರುವ ಕಷ್ಟದ ವಿಚಾರದಿಂದ ಅವಳ ಎದೆಯೊಡೆದು ನೀರಾಯಿತು. ಆದರೆ ನಾರದರು ಸುಳ್ಳುಹೇಳಲಾರರೆಂದು ಅವಳು ನಂಬಿದ್ದಳು. ಆದುದರಿಂದ ಅವಳು ಮಗಳನ್ನು ಎತ್ತಿ ಮುದ್ದಿಟ್ಟುಕೊಂಡು ಹೇಳಬೇಕಾಗಿರುವ ನಾಲ್ಕು ಬುದ್ಧಿವಾದಗಳನ್ನು ಹೇಳಿ, ಕೊನೆಗೆ "ತಂಗೀ, ನೀನೇನೂ ಅರಿಯದವಳಲ್ಲ. ನಿನಗೂ ನಿನ್ನ ಪತಿಗೂ ಹೇಗೆ ಸುಖಸಮಾಧಾನಗಳಾಗುವುವೋ ಹಾಗೆ ನಡೆದುಕೋ. ಸುಖದಿಂದ ಬಹುಕಾಲ ಬಾಳಿ ಆನಂದವನ್ನು ಅನುಭವಿಸು." ಎಂದು ಆಶೀರ್ವಾದಮಾಡಿ ಬೀಳ್ಕೊಟ್ಟು ಕಳುಹಿದಳು.

ಸತಿಯು ಪತಿದೇವನೊಂದಿಗೆ ಕೈಲಾಸಗಿರಿಗೆ ಗಮನಮಾಡಿದಳು. ಕೈಲಾಸವು ಬಹು ಮನೋಹರವಾದ ಪ್ರದೇಶ. ಅಲ್ಲಿ ಋತುಭೇದವಿಲ್ಲ. ಸದಾ ವಸಂತಋತುವೇ ಸರಿ! ಎತ್ತನೋಡಿದತ್ತ ಮನೋಹರವಾದ ಸೃಷ್ಟಿಯ ಸಹಜ ಸೌಂದರ್ಯವು ವಿರಾಜಿಸುತ್ತಿರುವುದು. ಸದಾ ಆನಂದ; ಆನಂದದಿಂದ ಸೃಷ್ಟಿಯೇ ನಗುವಂತೆ ತೋರುವುದು. ಮನಸ್ಸಿನ ಚಂಚಲತೆಗೆ ಅಲ್ಲಿ ಕಾರಣವೇ ಇರಲಿಲ್ಲ. ಸಕಲ ಪ್ರಾಣಿಗಳೂ, ಪಶುಪಕ್ಷಿ ಕ್ರಿಮಿಕೀಟಕಗಳೂ ಗಿಡಗಂಟಿ ತರುಲತೆಗಳೂ ಸಕಲ ಸಮೃದ್ಧಿಯಿಂದ ಸುಖದಿಂದ ವಾಸಿಸುವುವು.

ಸತಿಗೆ ವಸ್ತ್ರಾಲಂಕಾರಗಳ ಮೇಲೆ ಮೊದಲಿನಿಂದಲೂ ಪ್ರೀತಿಯಿರಲಿಲ್ಲ. ಈಗಂತೂ ಶ್ಮಶಾನವಾಸಿಯ ಗೃಹಿಣಿಯಾಗಿರುವಳು. ಪತಿಯು ಉಡುವುದು ಹಲಿದೊಗಲು. ಸತಿಗೂ ಅದೇ ಉಡುಗೆ; ನಾರಬಟ್ಟೆಯಾದರೂ ಆಗುವುದು. ಸಣ್ಣ ದೊಡ್ಡ ರುದ್ರಾಕ್ಷಿಯ ಸರಗಳೇ ಆಕೆಯ ಪತಿಗೂ ಆಕೆಗೂ ಅಲಂಕಾರಗಳು. ಮನೆಯಲ್ಲಿ ಆಳುಹೋಳುಗಳಿಗೇನೂ ಕೊರತೆಯಿರಲಿಲ್ಲ. ನಂದಿ,ಭೃಂಗಿ ಇವರಿಬ್ಬರು ಕೈಲಾಸಗಿರಿಯ ರಕ್ಷಕರು;ಸತಿಗೂ ಆಕೆಯ ಪತಿಗೂ ಪರಮಾಪ್ತರಾದ ಸೇವಕರು. ಅವರು ಸತಿಯನ್ನು ತಾಯಿಯೆಂದು ಕರೆಯುವರು. ಸತಿಯೂ ಅವರನ್ನು ಹಡೆದ ಮಕ್ಕಳಂತೆಯೇ ನೋಡಿಕೊಳ್ಳುವಳು.

**ಒಂದೊಂದು ದಿನ ಸತಿಪತಿಗಳಿಬ್ಬರೂ ಕೈಲಾಸಗಿರಿಯ ಬೇರೆ ಬೇರೆ ಭಾಗಗಳಲ್ಲಿ ಸೃಷ್ಟಿಯ ಅನುಪಮಸೌಂದರ್ಯದ ನಿರೀಕ್ಷಣೆಯಲ್ಲಿ ನಿಮಗ್ನರಾಗುವರು.** ಒಮ್ಮೊಮ್ಮೆ ದೊಡ್ಡದೊಂದು ಹಾಸುಗಲ್ಲ ಮೇಲೆ ಕುಳಿತು, ಯೋಗಶಾಸ್ತ್ರ ಆಗಮ-ನಿಗಮಗಳ ವಿಚಾರ, ಧರ್ಮಾಧರ್ಮಮಾರ್ಗಗಳ ವಿವಾದ ಪ್ರಪಂಚದ ಪ್ರಜೆಗಳ ಸುಖದುಃಖವಿವೇಕ ಮುಂತಾದ ಸಂಗತಿಗಳನ್ನು ಕುರಿತು ಮಾತಾಡುತ್ತಿರುವರು. ಸತಿಯು ತನ್ನ ಪರಮಗುರು ಶಂಕರನೊಡನೆ ಒಂದು ದಿನ ಕೈಲಾಸಗಿರಿಯ ಒಂದು ಭಾಗದಲ್ಲಿ ಹೋಗಿ ಕುಳಿತುಕೊಂಡಾಗ, ಅವರಿಬ್ಬರಲ್ಲಿ ಈ ರೀತಿ ಸಂಭಾಷಣೆ ನಡೆಯಿತು:-

**ಸತಿ:—** ಜಗತ್ಪಿತನೇ, ನನಗೆ ಈ ಮನೋಹರವಾದ ಸೃಷ್ಟಿಸೌಂದರ್ಯದ ನಿರೀಕ್ಷಣೆಯಿಂದ ಪರಮಾನಂದವಾಯಿತು. ನಾನು ಕೈಲಾಸಗಿರಿಗೆ ಕಾಲಿಕ್ಕಿದಂದಿನಿಂದಲೂ ಒಂದು ದಿನವಾದರೂ ನನ್ನ ಮನಸ್ಸಿಗೆ ದುಃಖದ ಕಲ್ಪನೆ ಕೂಡ ಸೋಂಕಲಿಲ್ಲ. ಆದುದರಿಂದಲೇ ಪ್ರಪಂಚವು ಮಹಾದುಃಖಕ್ಕೆ ಕಾರಣವಾಗಿರುವುದೆಂದು ಜಗತ್ತಿನ ಜನರು ಹೇಳುತ್ತಿರುವ ಮಾತಿನಲ್ಲಿ ನನಗೆ ಈಗ ತುಂಬ ಸಂಶಯವುಂಟಾಗಿರುವುದು. ಅವರ ದುಃಖಕ್ಕೆ ಕಾರಣವೇನು ? ಹೇಳಬಲ್ಲಿರಾ ? ಹಿಂದೊಂದು ದಿನ ನನ್ನ ಅಕ್ಕ ಯೋಗಿನಿಯು ಈ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳಿದ್ದಳು.

**ಶಂಕರ:—** ಸತೀ, ನೀನಿಂದು ಒಂದು ಗಹನವಾದ ಪ್ರಶ್ನೆಯನ್ನು ಕೇಳಿದೆ. ಅಡ್ಡಿಯಿಲ್ಲ. ನಿನ್ನ ಪ್ರಶ್ನೆಗೆ ತಕ್ಕ ಉತ್ತರವನ್ನೂ ಹೇಳುವೆನು. ಮೊದಲು ನನ್ನದೊಂದು ಪ್ರಶ್ನೆ. ನಿನೀಗ ಈ ಸೃಷ್ಟಿಸೌಂದರ್ಯವನ್ನು ನೋಡಿ ತುಂಬ ಆನಂದವಾಯಿತೆಂದೆಯಲ್ಲವೇ ? ಹೇಳು. ಆನಂದವು ಎಲ್ಲಿರುವುದು ? ಈ ತಿಳಿಗೊಳದ ಸ್ಫಟಿಕ ಸ್ವಚ್ಛವಾದ ಜಲದಲ್ಲಿರುವುದೇ ? ಈ ಪೂತು ಕಾತು ಮನೋಹರವಾಗಿರುವ ಜಂಬೀರ ವೃಕ್ಷದಲ್ಲಿರುವುದೇ? ಅಗೋ ದೂರದಲ್ಲಿ ಮನೋಹರವಾಗಿ ತೋರುತ್ತಿರುವ ಅರಣ್ಯದಲ್ಲಿರುವುದೇ ? ಎಲ್ಲಿರುವುದು ?

ಪತಿದೇವನ ಮಾತಿಗೆ ತಟ್ಟನೆ ಸಮರ್ಪಕವಾದ ಉತ್ತರವನ್ನು ಕೊಡಲು ಸತಿಗೆ ಸಾಧ್ಯವಾಗಲಿಲ್ಲ. ಆದರೂ ಆಕೆ ಬಹು ಅಭಿಮಾನಿ. ಒಮ್ಮೆ ತನ್ನ ಮಾತು ಸೋಲುವುದೆಂದರೆ ಅದು ಅವಳಿಗೆ ಎಷ್ಟೂ ಸಹಿಸದು. ಆದುದರಿಂದ

ಆವಳು “ ಜಗತ್ಪಿತನೇ, ನೀವೆನ್ನುವುದಾದರೂ ಏನು ? ಜಗತ್ತಿನಲ್ಲಿ ಸುಖವೇ ಇಲ್ಲವೆನ್ನುವಿರಾ ? ಆನಂದವು ಜಗತ್ತಿನಲ್ಲಿ ಇಲ್ಲದಿದ್ದರೆ ಅದರ ಪ್ರಾಪ್ತಿಗಾಗಿ ಈ ಪ್ರಪಂಚವೆಲ್ಲಾ ಹಗಲಿರುಳೂ ಹೆಣಗುತ್ತಿರಲು ಕಾರಣವೇನು? **‘ಸುಖಂ ಮೇಭೂಯಾತ್, ಭದ್ರಂ ಮೇಭೂಯಾತ್’** ( ನನಗೆ ಸುಖವಾಗಲಿ, ನನಗೆ ಮಂಗಳವಾಗಲಿ ) ಎಂದು ಮೂರು ವರುಷದ ಮಗುವಿನಿಂದ ನೂರು ವರುಷದ ವೃದ್ಧನವರೆಗಿನ ಸರ್ವರೂ ಕನಸಿನಲ್ಲಿಯೂ ಕನವರಿಸುತ್ತಿರುವುದು ಕೇವಲ ನಿರರ್ಥಕವಾದುದೇನು ? ” ಎಂದು ಪ್ರತಿಯಾಗಿ ಪ್ರಶ್ನೆ ಮಾಡಿದಳು.

ಸತಿಯ ಯುಕ್ತಿವಾದವನ್ನು ಕೇಳಿ ಕೈಲಾಸಪತಿಗೆ ನಗೆ ಬಂದಿತು. ಅವನು:— “ ಹೆಂಗುಸರ ಸ್ವಭಾವವೇ ಇದು; ಮಾತಿಗೆ ತಕ್ಕ ಉತ್ತರ ಕೊಡಲಾರದೆ ಹೋದರೆ ಹಾಗೆಂದು ಒಪ್ಪಿಕೊಳ್ಳುವುದು ಮಾತ್ರ ಅವರಿಂದ ಎಂದೂ ಆಗದು. ಸತೀ, ಇರಲಿ, ನಾನೇ ಹೇಳುತ್ತೇನೆ. ಸುಖದುಃಖಗಳೆಂಬಿವು ಕೇವಲ ಕಲ್ಪಿತ ಸಾಮಗ್ರಿಗಳು. ಅವು ಬಾಹ್ಯಸೃಷ್ಟಿಯೊಳಗಿನ ಯಾವ ವಸ್ತುವಿನಲ್ಲಿಯೂ ಇರುವುದಿಲ್ಲ; ಅವು ಹೊರಗಿನಿಂದ ಬರತಕ್ಕವೂ ಅಲ್ಲ. ನಗನಟ್ಟುಗಳು, ಆಳುಹೋಳುಗಳು, ಧನಧಾನ್ಯಗಳು, ದನಕರುಗಳು ಹೆಂಡಿರು ಮಕ್ಕಳು ಇವುಗಳಲ್ಲಿ ಯಾವುದರಿಂದಲೂ ಸುಖವು ಹುಟ್ಟಲರಿಯದು. ಹಾಗೆಯೇ ಇವುಗಳ ಅಭಾವದಿಂದಲೇ ಆಗಲಿ ವಿಯೋಗದಿಂದಲೇ ಆಗಲಿ ದುಃಖವು ಒದಗದು. ಈ ವಿಧದ ಬಾಹ್ಯವಸ್ತುಗಳು ನಮ್ಮ ಸುಖದುಃಖಗಳಿಗೆ ಕಾರಣವಾಗುವವೆಂಬ ಮಾತು ಕೇವಲ ನಿರರ್ಥಕವಾದುದೇ ಸರಿ. ಯಾರು ಯಾರಿಗೂ ಸುಖವನ್ನೇ ಆಗಲಿ, ದುಃಖವನ್ನೇ ಆಗಲಿ ಕೊಡುತ್ತಿರುವುದಿಲ್ಲ. ಮತ್ತೊಬ್ಬರು ನಮಗೆ ಸುಖದುಃಖಗಳನ್ನು ಕೊಡುತ್ತಾರೆಂಬ ಮಾತು ಭ್ರಮಮೂಲಕವಾದುದು. ‡ ಸುಖವೆಂದರೆ ಸಂಪೂರ್ಣ ಸಮಾಧಾನವು; ಎಂದರೆ ಆಶಾಪಾಶರಹಿತವಾದ ಅಂತಃಕರಣದ ಶಾಂತಿಮಯವಾದ ಸ್ಥಿತಿಯೇ ಸುಖ. ಶಾಂತಿರಹಿತವಾದ, ಆಶಾಪಾಶಬದ್ಧವಾದ ಸ್ಥಿತಿಯೇ ದುಃಖ. ಸುಖದುಃಖಗಳು ಮನಸ್ಸಿನ ಹೊರಗೆ ಎಲ್ಲಿಯೂ ಇರುವುದಿಲ್ಲ.

---

‡ सुखस्य दुःखस्य न कोपि दाता, परोददातीतिकुबुद्धिरोषा ॥

**ಸತಿ:—** ಪ್ರಭುವೇ, ನೀವೆಂದ ಮಾತು ಸರಿಯಲ್ಲವೆಂಬಂತೆ ತೋರುವುದು. ಪ್ರಪಂಚದೊಳಗಿನ ಯಾವ ವಸ್ತುವೂ ತಮಗೆ ಸುಖವನ್ನು ಕೊಡಲಾರದು, ಎಂದರೆ ಜನರಿಗೆ ಈ ಮಾತು ತೀರ ಹಾಸ್ಯಾಸ್ಪದವೆನಿಸುವುದರಲ್ಲಿ ಸಂಶಯವಿಲ್ಲ. ಮತ್ತು ಒಬ್ಬೊಬ್ಬರೂ ಈ ರೀತಿ ನಿವೃತ್ತಿಮಾರ್ಗವನ್ನು ಅವಲಂಬಿಸಿಬಿಟ್ಟರೆ ಜಗತ್ತು ಹೇಗೆ ನಡೆಯಬೇಕು? ಮನುಷ್ಯಪ್ರಾಣಿಯು ಕೈಕೊಳ್ಳುವ ಒಂದೊಂದು ಕಾರ್ಯಕ್ಕೂ ಅವನ ಅಂತರಂಗದ ಆಶೆಯೇ ಕಾರಣವು. ಆ ಆಶೆಯೇ ಇಲ್ಲದಿದ್ದರೆ ಅವನು ಕಾರ್ಯಪ್ರವೃತ್ತನಾಗುವುದು ಹೇಗೆ? ಕೆಲವರು ಸುಖಾಭಿಲಾಷೆಯಿಂದ, ಕೆಲವರು ದುಃಖನಿವಾರಣೆಗಾಗಿ ಕಾರ್ಯವನ್ನು ಕೈಕೊಳ್ಳುವರು. ಸುಖದುಃಖಗಳು ಬಾಹ್ಯ ಕಾರಣಗಳಿಂದ ಉದ್ಭವಿಸಲಾರವೆಂದು ನೀವೇ ಉಪದೇಶಿಸಿಬಿಟ್ಟರೆ ಈ ಕರ್ಮಭೂಮಿಯು ನಾಳೆಯೇ ಆಲಸ್ಯದ ತವರ್ಮನೆಯಾಗಬಹುದು. ಪ್ರಪಂಚದಲ್ಲಿ ಯಾವ ಕಾರ್ಯಕ್ಕೂ ಕಾರಣವೇ ಉಳಿಯದು. ನೀವು ಉಪದೇಶಿಸುವ ಈ ಪರಿಯ ವೇದಾಂತವಿಚಾರವು ನಿಮ್ಮ ಪ್ರಜೆಗಳ ಅಂತರಂಗವಲ್ಲಿ ಆಲಸ್ಯದ ಬೀಜದಂತೆ ಪರಿಣಮಿಸುವುದರಲ್ಲಿ ಸಂದೇಹವಿಲ್ಲ.

**ಶಂಕರ:—** ಪ್ರಿಯೇ, ವೇದಾಂತವಿಚಾರವು ಪ್ರಜೆಗಳ ಆಲಸ್ಯದ ಉತ್ಪತ್ತಿಗೆ ಕಾರಣವಾಗುವುದೆಂಬ ಮಾತು ನಿರಾಧಾರವಾದುದು. ಇದಕ್ಕೆ ನಾನೇ ಒಂದು ಉದಾಹರಣೆ. ನಾನು ವೇದಾಂತವಿಚಾರವನ್ನು ಪ್ರತಿಪಾದಿಸುವೆನೆಂದು ನೀನು ನನ್ನನ್ನು ಸೋಮಾರಿಯೆನ್ನುವೆಯೇನು? ವೇದಾಂತವಿಚಾರವನ್ನು ಕೈಕೊಳ್ಳುವುದೆಂದರೆ ಅತ್ತಿತ್ತ ನಾಲ್ಕು ದಾಸರ ಪದಗಳನ್ನು ಹಾಡುತ್ತ ಕಾರ್ಯಸಾಧುವಿನ ವೇಷದಿಂದ ಅಲೆಯುತ್ತಿರುವುದಲ್ಲ. ವೇದಾಂತವಿಚಾರದಲ್ಲಿ ಇರತಕ್ಕ ರಹಸ್ಯವು ಒಂದೇ. "ನಾನು ಯಾರು? ನನ್ನ ಕರ್ತವ್ಯದ ವ್ಯಾಪ್ತಿಯೆಷ್ಟು?" ಇದೇ ವೇದಾಂತದ ಗುಟ್ಟಿನ ಗುಟ್ಟು. ನಾನು ಯಾರೆಂಬ ಪ್ರಶ್ನೆಯನ್ನು ಬಿಡಿಸಿದ ಮನುಷ್ಯನ ಮನಸ್ಸಿನೊಳಗಿನ ಅಹಂಕಾರವು ಅಳಿದುಹೋಗಿ ಅಲ್ಲಿ ವಿಶ್ವಪ್ರೇಮದ (ವಿಶ್ವಬಂಧುತ್ವದ) ಭಾವನೆ ಉದಯವಾಗುವುದು. ಈ ವಿಶ್ವಪ್ರೇಮದ ಭಾವನೆ ಹುಟ್ಟಿತೆಂದರೆ ಮನುಷ್ಯನ ಮನಸ್ಸಿಗೆ ಸಂಸ್ಕಾರವಾಗಿ ಅವನಿಗೆ ತನ್ನ ಕರ್ತವ್ಯದ ವ್ಯಾಪ್ತಿಯ ಜ್ಞಾನವಾಗುವುದು. ಎಂದರೆ ತಾನು, ತನ್ನ ಹೆಂಡತಿ, ತನ್ನ ಮಕ್ಕಳು, ತನ್ನ

ಆಪ್ತರು ಇಷ್ಟರು ಇವರ ಹಿತಚಿಂತನೆಯೇ ತನ್ನ ಕರ್ತವ್ಯವೆಂಬ ಅವನ ಮನಸ್ಸಿನೊಳಗಿನ ಸಂಕುಚಿತ ಭಾವನೆಯಳಿದು, ಅಲ್ಲಿ ತನ್ನ ಸಮಾಜ, ತನ್ನ ದೇಶ, ತನ್ನ ರಾಷ್ಟ್ರ, ಜನ್ಮದಾತನಾದ ಭಗವಂತನ ಮಕ್ಕಳಾದ ಪ್ರಪಂಚದ ಪ್ರಜೆಗಳು ತನ್ನ ಬಂಧುಗಳು, ಎಂಬ ಶ್ರೇಷ್ಠವಾದ ಭಾವನೆಗಳು ಉದಯವಾಗಿ ಪ್ರಪಂಚದ ಹಿತದ ಕಡೆಗೆ ಅವನ ದೃಷ್ಟಿಯು ಹೊರಳುವುದು. ಹೀಗೆ ಪ್ರಪಂಚದ ಹಿತದಲ್ಲಿ ಆಸಕ್ತಿಯುಳ್ಳ ಮನುಷ್ಯನು ಆಲಸ್ಯಗಾರನಾಗುವ ಬಗೆ ಹೇಗೆ ? ಮನುಷ್ಯನ ಮನಸ್ಸಿನಲ್ಲಿ ಹೇಗೆ ಹೇಗೆ ವಿಶ್ವಬಂಧುತ್ವದ ಭಾವನೆ ಹೆಚ್ಚು ಹೆಚ್ಚು ದೃಢವಾಗುತ್ತ ಹೋಗುವುದೋ ಹಾಗೆ ಹಾಗೆ ಅವನ ತಲೆಯಮೇಲಿನ ಕರ್ತವ್ಯಭಾರವು ಹೆಚ್ಚುತ್ತ ಹೋಗುವುದು. ಅವನ ಮೈಯೊಳಗಿನ ರಕ್ತಕ್ಕೆ ಬಿಸಿಯೇರುವುದು. ನಿರಹಂಕಾರಿಯಾದ ವಿಶ್ವಪ್ರೇಮಿಯಾದ ಮನುಷ್ಯನಿಗೆ ಪ್ರಪಂಚವೇ ಸಹಾಯ ಮಾಡುವುದು. ಅವನಿಂದ ಪ್ರಪಂಚದ ನಿಜವಾದ ಹಿತವು ಸಾಧಿಸುವುದು..ಅವನೇ ಧನ್ಯನು! ಮನುಷ್ಯಜನ್ಮವನ್ನು ಪಡೆದುಕೊಂಡುದರ ಸದುಪಯೋಗವನ್ನು ಮಾಡಿಕೊಡುವನೆಂದರೆ ಅವನೊಬ್ಬನೆ! ಅವನೊಬ್ಬನೇ ಸೃಷ್ಟಿಯಲ್ಲಿ ಮಾನವ ರೂಪದಿಂದ ಅವತರಿಸಿದ ಈಶ್ವರನು. ಯಾವ ದೇಶದಲ್ಲಿ ಇಂತಹ ಅಹಂಕಾರ ಮಮಕಾರಗಳನ್ನು ತೊರೆದು ಕೇವಲ ವಿಶ್ವಪ್ರೇಮದ ಭಾವನೆಯಿಂದಲೇ ಕಾರ್ಯಗಳನ್ನು ಮಾಡತಕ್ಕ ಜನರು ಇರುವರೋ ಆ ದೇಶದ ಕಲ್ಯಾಣವಾಗುವುದರಲ್ಲಿ ಸಂದೇಹವಿಲ್ಲ. ವಿಶ್ವಬಂಧುತ್ವದ ಭಾವನೆ ಹುಟ್ಟಿತೆಂದರೆ ಸ್ವಂತ ಸುಖದುಃಖಗಳ ಕಲ್ಪನೆ ತಾನಾಗಿಯೇ ಅಳಿದು ಹೋಗುವುದು. ಉಳಿಯುವುದು ಕೇವಲ ಶಾಂತಿ ! ಶಾಂತಿಮಯವಾದ ಅಂತರಂಗ !

ಹೇ ! ತಾಯೇ ! ಭಗವತೀ ! ಭಾರತಭೂಮಾತೇ ! ಕರ್ಣಾಟಕ ಜನನೀ ! ನಿನ್ನ ಉದರದಲ್ಲಿ ಇಂತಹ ಸ್ವಾರ್ಥತ್ಯಾಗಿಗಳಾದ ಮಹಾಪುರುಷರು ಎಷ್ಟು ಜನರಿರುವರು ! ಎಷ್ಟು ಜನರು ಆಗುವರು? ಎಂದು ಆಗುವರು?

**ಸತಿ:**—ಜಗತ್ಪಿತನೇ, ನೀನೆಂದಮಾತು ಸತ್ಯವೇ ಸರಿ. ಆದರೆ ಇದರಲ್ಲಿ ಇನ್ನೊಂದು ಅಡಚಣಿಯಿರುವುದು. ಸಕಲರೂ ಸರ್ವ ಸ್ವಾರ್ಥವನ್ನೂ ತ್ಯಜಿಸಿ ವಿಶ್ವಪ್ರೇಮದ ಬಳಕೆಯಿಂದ ನಡೆಯುವುದು ಸಾಧ್ಯವಾದ ಮಾತೆಂದು ನಾನು ಒಪ್ಪಿಕೊಳ್ಳಲಾರೆನು. ಆದುದರಿಂದ ಭೂಲೋಕದ ಪ್ರಜೆ.

ಗಳು ತಮ್ಮ ಜನ್ಮಸಾರ್ಥಕತೆಯು ಸಲುವಾಗಿ ನಡೆದುಕೊಳ್ಳಬೇಕಾಗಿರುವ ಒಂದು ಸುಲಭವಾದ ಮಾರ್ಗವನ್ನು ತೋರಿಸಿಕೊಟ್ಟರೆ ಒಳ್ಳೆಯದಾಗುವುದು. ನನ್ನ ನಿಮ್ಮಂಥವರ ಮಾತು ಬೇರೆ; ಸಾಮಾನ್ಯಜನರ ಮಾತು ಬೇರೆ. ಒಂದೊಂದು ವ್ಯಕ್ತಿಗೂ ಪೂರ್ವಜನ್ಮದ ಸಂಸ್ಕಾರವೆಂಬುದೊಂದು ಇದ್ದೇ ಇರುವುದಲ್ಲವೇ ? ಆ ಸಂಸ್ಕಾರಬಲದಿಂದ ಮನುಷ್ಯಪ್ರಾಣಿಯು ಪ್ರಪಂಚದ ಮೋಹಜಾಲದೊಳಗಿಂದ ಮುಕ್ತನಾಗಿ ವಿಶ್ವಪ್ರೇಮದ ಮಾತನ್ನು ಅರಿತುಕೊಂಡು ಅದನ್ನು ಆಚರಿಸಲು ಶಕ್ತನಾಗಲಾರನು. ಆದುದರಿಂದ ಅಂಥವರು ನೆನಪಿನಲ್ಲಿಡತಕ್ಕ ಒಂದೆರಡು ಮಾತುಗಳನ್ನು ತಾವು ಹೇಳಿದರೆ ನನಗೆ ಸಮಾಧಾನವಾಗುವುದು.

**ಶಂಕರ:—** ಒಳ್ಳೆಯದು. ಹಾಗೆಯೇ ಮಾಡುವೆನು. "ಆಹಾ ! ಸತೀ ! ಅಲ್ಲಿ ನೋಡಿದೆಯಾ ? ಎಷ್ಟು ಚಮತ್ಕಾರವು ನಡೆದಿದೆ ?" ಎಂದು ಶಂಕರನು ಸ್ವಲ್ಪ ದೂರದಲ್ಲಿರುವ ಅರಣ್ಯದ ಕಡೆಗೆ ಬೆರಳೆತ್ತಿ ತೋರಿದನು.

ಸತಿಯು ಪತಿದೇವನ ತರ್ಜನಿಯು ಬೆರಳಿನ ನಿಟ್ಟನ್ನು ನಿರೀಕ್ಷಿಸಿ ನೋಡ ತೊಡಗಿದಳು. ಅರಣ್ಯದ ಮಧ್ಯದಲ್ಲೊಂದು ಸುಂದರವಾದ ದೇವದಾರು ವೃಕ್ಷದ ಕೆಳಗೆ ಒಂದು ಗಂಡರಳೆಯು ತನ್ನ ಪರಿವಾರದೊಡನೆ ಬಳಿಯಲ್ಲಿಯೇ ನುಳಿದಾಡುತ್ತಿರುವ ಉಗ್ರವಾದೊಂದು ತೋಳನನ್ನು ನೋಡಿಯೂ ನೋಡದಂತೆ ಆನಂದದಿಂದ ನಿಂತಿದ್ದಿತು.

" ಓಹೋ ! ಸತೀ, ನೋಡಿದೆಯಾ ! ನಿಷ್ಕರುಣೆಯಾದ ವ್ಯಾಧನ ಬಾಣದಿಂದ"—ಶಂಕರನು ಈ ಮಾತನ್ನು ಹೇಳಲು ಆರಂಭಿಸುವಷ್ಟರಲ್ಲಿ, ಆ ಮೃಗದ ಆನಂದ ಮಯಸ್ಥಿತಿಯನ್ನು ನೋಡಿ ಶಾಂತಚಿತ್ತಳಾಗಿದ್ದ ಸತಿಯು ಶರವಿದ್ಧ ಮೃಗದ ದೇಹವು ನೆಲಕ್ಕುರುಳಿದಂತೆಯೇ, ತಾನೂ ನೆಲಕ್ಕೆ ಕುಸಿದು ಬಿದ್ದಳು. ಶಂಕರನು ಸತಿಯ ಅವಸ್ಥೆಯನ್ನು ನೋಡಿ ಆಕೆಯ ಬಳಿಗೆ ಹೋಗಿ ಸಮಾಧಾನಪಡಿಸಿ ಈ ರೀತಿಯಾಗಿ ಉಪದೇಶಮಾಡಿದನು:—

"ಸತೀ, ಈ ಪ್ರಪಂಚದ ಅವಸ್ಥೆಯೇ ಹೀಗೆ. ಈಗ ನೀನು ನೋಡಿದ ಒಂದು ಸಾಮಾನ್ಯ ಸಂಗತಿಯಿಂದ ಸಮಸ್ತ ಪ್ರಪಂಚದ ತತ್ತ್ವವನ್ನೂ ಗ್ರಹಿಸಬಹುದು. ಈಗ ನೀನು ನೋಡಿದ ಅರಣ್ಯವೇ ದುಃಖಮೂಲವಾದ ಸಂಸಾರ. ಆ ಪುಷ್ಪವಾಟಿಕೆಯಂತಿರುವ ದೇವದಾರು ವೃಕ್ಷವೇ ಗೃಹ

ಪ್ರೀತಿಯಿಂದ ಅವನನ್ನು ಹಿಡಿದೆತ್ತಿ ಅಪ್ಪಿಕೊಂಡು ಆಶೀರ್ವದಿಸಿ ಸನ್ಮಾನಿಸಿದನು. ಇದರಿಂದ ದಕ್ಷನಿಗೆ ತುಂಬ ಸಂತೋಷವಾಯಿತು. ಮನಸ್ಸಿನೊಳಗಿನ ಆ ಸಂತೋಷವು ಮುಖದಲ್ಲಿ ಒಡೆದು ತೋರಿತು. ಆದರೆ ಈ ಸ್ಥಿತಿ ಪರಕ್ಷಣದಲ್ಲಿಯೇ ತೀರ ಬದಲಾಗಿಹೋಯಿತು.

ಕೈಲಾಸಪತಿ ಶಂಕರನು ಮಾವನಾದ ದಕ್ಷರಾಜನ ಆಗಮನಕಾಲದಲ್ಲಿ ಸನ್ಮಾನ ತೋರಿಸುವುದಕ್ಕಾಗಿ ತನ್ನ ಆಸನವನ್ನು ಬಿಟ್ಟು ಎದ್ದಿರಲಿಲ್ಲ. ಇದನ್ನು ಕಂಡು ಅಭಿಮಾನಿಯಾದ ದಕ್ಷರಾಜನು ಅಳಿಯನು ತನ್ನನ್ನು ಬೇಕೆಂದು ಅಪಮಾನ ಮಾಡಿದನೆಂದು ಭಾವಿಸಿದನು. ಸತಿಯ ವಿವಾಹಕಾಲದಲ್ಲಿ ಹುಟ್ಟಿದ 'ಶಂಕರನು ತನ್ನ ವೈಭವಕ್ಕೆ ಅನುರೂಪನಾದ ಅಳಿಯನಲ್ಲ' ಎಂಬ ದುರ್ವಿಚಾರವೊಂದು ಆತನ ಮನಸ್ಸಿನಲ್ಲಿ ಇಂದಿಗೂ ಕುದಿಯುತ್ತಲೇ ಇದ್ದಿತು. ನಾಲ್ಕು ಜನರು ನೆರೆದಲ್ಲಿ ಏನಾದರೊಂದು ಕಾರಣದಿಂದ ಕೈಲಾಸಪತಿಯ ಹೆಸರು ಬಂದರೂ ದುರಭಿಮಾನಿಯಾದ ದಕ್ಷನಿಗೆ ಅದು ಸಹನೆಯಾಗುತ್ತಿರಲಿಲ್ಲ. ಶಿವನು ತನ್ನ ಅಳಿಯನೆಂದು ಹೇಳಲು ಅವನಿಗೆ ಬಲು ನಾಚಿಕೆ! ಮೂರು ಜನ್ಮದ ಕಡುವೈರಿಯಾದವನ ಹೆಸರನ್ನು ಕೂಡ ಎತ್ತದಿರುವಂತೆ, ದಕ್ಷನು ಅಂತಹ ಸಂದರ್ಭವೇ ಬಂದರೆ ಆ ಜೋಗಿ, ಆ ಬೂದಿಬಡಕ, . ಆ ಮಸಣದ ತಿರುಕ ಈ ರೀತಿಯಾಗಿ ಬಾಯಿಗೆ ಬಂದಂತೆ ತಿರಸ್ಕರಿಸಿ ಅಡ್ಡತಿಡ್ಡವಾಗಿ ಮಾತಾಡುವನು. ಇಂತಹ ಸ್ಥಿತಿಯಲ್ಲಿ ಇಂದು ಈ ದೇವಸಭೆಯಲ್ಲಿ ಶಂಕರನು ಬೇಕೆಂದು ತನಗೆ ಅಪಮಾನಮಾಡಿದನೆಂದು ದಕ್ಷನು ತಿಳಿದುಕೊಂಡುದರಲ್ಲಿ ಆಶ್ಚರ್ಯವಾದರೂ ಏನು? ಭೃಗುಮುನಿಯು ಯಜ್ಞಕುಂಡದ ಅಗ್ನಿಗಿಂತಲೂ ದಕ್ಷನ ಅಂತರಂಗದ ಅಭಿಮಾನಜನ್ಯವಾದ ರೋಷಾಗ್ನಿಯೇ ಬಹು ಪ್ರಜ್ವಲಿತವಾಗಿ ತೋರಿತು. ಅವನು ಉರಿದುರಿದು ಬೀಳುತ್ತಿದ್ದನು. ಏನಾದರೇನು? ಸದಾ ಶಾಂತನಾದ ಶಂಕರನ ಮನಸ್ಸು ಮಾತ್ರ ತೀರ ಶಾಂತವಾಗಿಯೇ ಇದ್ದಿತು. ಅವನಿಗೆ ಎಷ್ಟು ಸ್ವಾಭಿಮಾನವೋ ಅಷ್ಟೇ ಪರರ ಅಭಿಮಾನ. ತನಗೇ ಮಾನಾಪಮಾನದ ಭೇದವಿಲ್ಲದವನಿಗೆ ಮಾವನ ಮಾನಾಪಮಾನದ ಗೊಡವೆಯೆಲ್ಲಿಯದು?

ಬ್ರಹ್ಮವಿಷ್ಣುಗಳಿಗೆ ದಕ್ಷನ ಕೋಪದ ವಾರ್ತೆ ತಿಳಿಯಿತು. ಅವರು ದಕ್ಷನನ್ನು ಕರೆದು ಸಮಾಧಾನಪಡಿಸಲು ಯತ್ನಿಸಿದರು. ಆದರೆ ಯಾವುದ

ರಿಂದಲೂ ಆತನ ಮನಸ್ಸು ಸಮಾಧಾನವಾಗಲಿಲ್ಲ. ಕೈಲಾಸಪತಿಯ ಹೆಸರಿನ ನೆನಪಾದ ಕೂಡಲೆ ಅವನ ಮನಸ್ಸು ಅವನ ಅಂಕೆಯಲ್ಲಿ ಉಳಿಯದು. "ಎಂದಾದರೂ ಒಂದುದಿನ ಈ ಹಗೆಯನ್ನು ತೀರಿಸಿದರೇ ನನ್ನ ಹೆಸರು ದಕ್ಷ. ದಕ್ಷನ ಕಾರ್ಯದಕ್ಷತೆಯನ್ನು ಒಮ್ಮೆ ಈ ತಿರುಕನು ನೋಡಲಿ! ಎಂದು ಮನಸ್ಸಿನಲ್ಲಿ ದೃಢಪ್ರತಿಜ್ಞೆಯನ್ನು ಮಾಡಿದನು.

ಭೃಗುಮುನಿಯು ಯಜ್ಞಸಮಾಪ್ತಿಯಾದ ತರುವಾಯ ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ತೆರಳಿದರು. ಶಂಕರನೂ ತನ್ನ ಪರಿವಾರದೊಂದಿಗೆ ಕೈಲಾಸಗಿರಿಗೆ ಬಂದು ನಡೆದ ವೃತ್ತಾಂತವನ್ನೆಲ್ಲಾ ಸತಿಗೆ ಉಸಿರಿದನು. ಸತಿಗೆ ತಂದೆಯ ದುರಭಿಮಾನವನ್ನು ಕೇಳಿ ಬಹುವಿಷಾದವಾಯಿತು. ಅವಳು ಪ್ರಭುವೇ, ಈ ಲೋಕದಲ್ಲಿ ಜನರು ಏಕೆ ಈ ರೀತಿಯಾಗಿ ಅಹಂಕಾರಾಗ್ನಿಯಿಂದ ಬೆಂದು ಬೆಂಡಾಗಿ ತಮ್ಮ ಸಕಲ ಸೌಖ್ಯಕ್ಕೂ ಎರವಾಗುತ್ತಿರುವರು? ಅಹಂಕಾರವೆಂಬ ವಿಷವನ್ನು ತಮ್ಮ ಈ ಪ್ರಪಂಚದೊಳಗಿನ ಅಮೃತ ಸಮಾನವಾದ ಶಾಂತಿರಸದೊಡನೆ ಮಿಶ್ರಮಾಡಿಕೊಂಡು ಸರ್ವಸ್ವವನ್ನೂ ಏಕೆ ಕೆಡಿಸಿಕೊಳ್ಳುತ್ತಿರುವರು?



**ಶಂಕರ:—** ಸತೀ, ನಿನಗೆ ಏನೆಂದು ಉತ್ತರವನ್ನು ಹೇಳಲಿ? ಪ್ರಪಂಚವು ನಡೆಯಲಿಕ್ಕೆ ಅಭಿಮಾನವು ಬೇಕೇಬೇಕು. ಅಭಿಮಾನವಿಲ್ಲದಿದ್ದರೆ ಮನುಷ್ಯನು ಮನುಷ್ಯನೆನಿಸಿಕೊಳ್ಳಲಾರನು. ನಾನು, ನನ್ನದು, ನನ್ನವರು ಎಂಬ ಅಭಿಮಾನವೇ ಈ ಪ್ರಪಂಚದ ಅಭಿವೃದ್ಧಿಗೆ ಕಾರಣವು. ತಾಯಿಗೆ ತನ್ನ ಮಗುವೆಂಬ ಅಭಿಮಾನವಿಲ್ಲದಿದ್ದರೆ ಅವಳು ಅದಕ್ಕೆ ಹಾಲುಣಿಸಿ ಬೆಳೆಯಿಸಲಾರಳು. ಗಂಡನು ಹೆಂಡತಿಯನ್ನು ಕಾಪಾಡಲಿಕ್ಕಿಲ್ಲ. ತಾಯಿಯು ಕರುವಿಗೆ ಮೊಲೆಯುಣಿಸದು. ಮನುಷ್ಯನು ಭೂಮಿಯನ್ನು ಬಿತ್ತಿಬೆಳೆಯನು. ಪ್ರಪಂಚದ ಸರ್ವಕಾರ್ಯಗಳ ಪ್ರವೃತ್ತಿಗೂ "ತಾನು, ತನ್ನದು" ಎಂಬ ಅಭಿಮಾನವೇ ಕಾರಣವು; ಅಭಿಮಾನವು ಪ್ರಪಂಚದ ನಾಶಕ್ಕೆ ಕಾರಣವಲ್ಲ. ಆದರೆ ಈ ತೆರದ ಅಭಿಮಾನವನ್ನು ಬೆಳೆಯಿಸಿಕೊಂಡು ಅದಕ್ಕೆ ದುರಭಿಮಾನದ ಸ್ವರೂಪವನ್ನು ಕೊಡುವುದು ಮಾತ್ರ ಬಲು ಕೆಟ್ಟದು; ಅದೇ ಸರ್ವ ನಾಶಕ್ಕೆ ಕಾರಣವಾಗುವುದು. ಅಭಿಮಾನಕ್ಕೆ ದುರಭಿಮಾನದ ಸ್ವರೂಪವು ಬಾರದಿರುವಂತೆ ಮಾಡಲು ಒಂದು ಉಪಾಯವುಂಟು. ನಾನು, ನಾನು ಎಂದು ಸಕ

ಲರೂ ಹೇಳುತ್ತಿರುವರಲ್ಲವೇ? ಆದರೆ ನಾನೆಂದರೆ ಏನೆಂಬದನ್ನು ತಿಳಿದವರು ತೀರ ವಿರಳ. "ನಾನು" ಎಂದರೆ ಏನೆಂಬುದನ್ನು ಸರಿಯಾಗಿ ತಿಳಿದುಕೊಂಡರೆ ಆ ಅಭಿಮಾನ ಸರ್ಪದ ವಿಷದ ಹಲ್ಲುಗಳನ್ನು ಕಿತ್ತು ಬಿಸುಟಂತಾಗುವುದು. ಸತೀ, ಈ ಜಗತ್ತಿನಲ್ಲಿ ಸಕಲರೂ "ನಾನು, ನಾನು" ಎನ್ನುತ್ತಾರೆ. ಅಷ್ಟೇ ಏಕೆ? ಒಬ್ಬ ಮನುಷ್ಯನನ್ನು ಕರೆದು ಪ್ರಶ್ನೆ ಮಾಡುತ್ತ ಹೋದರೆ, ಅವನು ನನ್ನ ಕೈ, ನನ್ನ ಕಾಲು, ನನ್ನ ಕಣ್ಣು, ನನ್ನ ಶರೀರ, ನನ್ನ ಇಂದ್ರಿಯಗಳು, ನನ್ನ ಪ್ರಾಣ, ನನ್ನ ಮನಸ್ಸು, ನನ್ನ ಬುದ್ಧಿ ಎಂದು ಹೇಳುವನು. ಆದುದರಿಂದ ಇವುಗಳಲ್ಲಿ ಯಾವುದೂ 'ನಾನು' ಎಂಬ ಸರ್ವನಾಮದ ಅರ್ಥ ಸೂಚಕವಲ್ಲವೆಂದಂತಾಯಿತು. ಇವೆಲ್ಲವುಗಳಿಂದ ಹೊರತಾಗಿ "ಆತ್ಮ" ಎಂಬುದೊಂದು ಬೇರೆಯೇ ಇರುವುದು. ಅದೇ ಈ ಸರ್ವನಾಮದ ಅರ್ಥ ಸೂಚಕವು. ಮತ್ತು **"आत्मा च परमात्मा च पर्यायो नात्रभेदधीः"** ಎಂದರೆ ಆತ್ಮ ಮತ್ತು ಪರಮಾತ್ಮ ಇವು ಪರ್ಯಾಯವಾಚಕ ಶಬ್ದಗಳು; ಇವುಗಳ ಅರ್ಥದಲ್ಲಿ ಭೇದವಿಲ್ಲ, ಎಂಬುದು ಪ್ರತಿಯೊಬ್ಬನೂ ತಿಳಿದುಕೊಂಡು ನಡೆಯತಕ್ಕ ಮಾತಾಗಿರುವುದು. ಈ ರೀತಿ ಸಕಲ ಚರಾಚರಗಳೂ ಸೃಷ್ಟಿಕರ್ತನ ಸಂಗಡ ಐಕ್ಯತೆಗೆ ಅರ್ಹವಾಗಿರುವುವೆಂದಮೇಲೆ ಮನುಷ್ಯನ "ನಾನು, ನೀನು, ಅವನು" ಎಂಬ ಭೇದಭಾವನೆಯೂ ಅಹಂಕಾರವೂ ಸಹಜವಾಗಿ ಅಳಿದುಹೋಗುವುವು. ಈ ರೀತಿಯಾದ ಭೇದಭಾವವು ಅಳಿದುಹೋಯಿತೆಂದರೆ ಸರ್ವಪ್ರಾಣಿಗಳನ್ನೂ ಸಮಭಾವದಿಂದ ನೋಡಲು ಮನುಷ್ಯನು ಸಮರ್ಥನಾಗುವನು. ಅವನಲ್ಲಿ ಭೂತದಯೆಯ ಶ್ರೇಷ್ಠ ಸ್ವರೂಪವು ಉದ್ಭವಿಸುವುದು. ಈ ಭಾವನೆ ಹುಟ್ಟಬೇಕಾದರೆ ಸೃಷ್ಟಿಯೊಳಗಿನ ಸಕಲ ಚರಾಚರಗಳೂ ಅವುಗಳ ಕರ್ತನ ಅಂಶವಾಗಿರುವವೆಂಬುದು ಹೃದಯಪುಟದಲ್ಲಿ ಅಂಕಿತವಾಗಬೇಕು.

**ಸತಿ:—** "ಜಗತ್ಪಿತನೇ, ನಿಮ್ಮ ಮಾತಿನ ಭಾವವು ತಿಳಿಯಿತು. ನಾನಿಂದು ಧನ್ಯಳಾದೆನು." ಎಂದು ಪತಿಯ ಪಾದಕ್ಕೆ ಎರಗಿದಳು. ತಂದೆಯ ಅಜ್ಞಾನಮೂಲಕವಾದ ದುರಭಿಮಾನದ ಅಪರಾಧವನ್ನು ಜ್ಞಾನಿಗಳಾದ ತಾವು ಕ್ಷಮಿಸಬೇಕೆಂದು ಬೇಡಿಕೊಂಡಳು. ಕೈಲಾಸಪತಿಯು– "ಸತೀ, ನನಗೇನು? ಜನರು ವಂದಿಸಿದರೂ ಒಂದೇ, ನಿಂದಿಸಿದರೂ ಒಂದೇ; ಪೂಜಿಸಿ

ದರೂ ಒಂದೇ, ಪೀಡಿಸಿದರೂ ಒಂದೇ; ನಾನು ಅವರನ್ನು ಎಂದೂ ತಿರಸ್ಕರಿಸೆನು. ಅವರ ಹಗೆ ತೀರಿಸಿಕೊಳ್ಳಲು ಯತ್ನಿಸೆನು. ಆದುದರಿಂದ ನೀನು ನಿನ್ನ ತಂದೆಯ ಅಪರಾಧಗಳಿಗಾಗಿ ಕ್ಷಮೆಯನ್ನು ಬೇಡುವ ಕಾರಣವೇ ಉಳಿಯಲಿಲ್ಲ. " ಎಂದು ಸಮಾಧಾನಪಡಿಸಿದನು.

ಇತ್ತ ನಿರಹಂಕಾರಿಯಾದ ಕೈಲಾಸಪತಿಯು ಈ ರೀತಿ ನಿರಭಿಮಾನತೆಯಿಂದ ವಿಚಾರಮಾಡುತ್ತಿರಲು ಅತ್ತ ದಕ್ಷಪುರಿಗೆ ತೆರಳಿದ ದಕ್ಷರಾಜನ ಅಂತರಂಗದ ದುರಭಿಮಾನಜನ್ಯವಾದ ತನ್ನ ಅಪಮಾನದ ಹಗೆ ತೀರಿಸಿಕೊಳ್ಳುವ ಚಿಂತೆಯು ಮನಸ್ಸನ್ನು ಕ್ಷಣಕ್ಷಣಕ್ಕೆ ಪೀಡಿಸುತ್ತಿದ್ದಿತು. ಅವನೊಂದು ಉಪಾಯವನ್ನು ಹುಡುಕಿದನು. " ಭೃಗುಮುನಿಯ ಯಜ್ಞಸಮಾರಂಭದ ಕಾಲದಲ್ಲಿ ಆ ಮಸಣದ ತಿರುಕನು ನನ್ನನ್ನು ಅಪಮಾನಪಡಿಸಿದನಲ್ಲವೇ? ಆದುದರಿಂದ ಇನ್ನು ಮುಂದೆ ಯಾರೂ ಯಜ್ಞಸಮಾರಂಭಕ್ಕೆ ಆ ಬೂದಿಬಡಕನನ್ನು ಕರೆಯಕೂಡದೆಂದು ಆಜ್ಞಾಪಿಸುವೆನು. ಎಲ್ಲರೂ ಶಿವಹೀನಯಜ್ಞವನ್ನು ಮಾಡಬೇಕು. ಇದೇ ಶಿಕ್ಷೆ! " ಎಂದು ಭಾವಿಸಿ ದಕ್ಷಪ್ರಜಾಪತಿಯು ತಾವು ಮಾಡುವ ಯಜ್ಞಕ್ಕೆ ಯಾರೂ ಶಿವನನ್ನು ಕರೆಯಕೂಡದೆಂದು ಆಜ್ಞಾಪಿಸಿದನು, ಸರಿ; ಆದರೆ ಶಿವಹೀನಯಜ್ಞವನ್ನು ಮಾಡಲು ಯಾರೂ ಮುಂದುವರಿಯಲಿಲ್ಲ. ಇತ್ತ ದಕ್ಷಪ್ರಜಾಪತಿಯ ಮಾತು ಮೀರುವುದೂ ಆಗದು! ಅತ್ತ ಸಕಲ ಮಂಗಳಕರನಾದ ಶಂಕರನನ್ನು ಕರೆಯದಿರುವುದೂ ಆಗದು. ಹೀಗಾಗಿ ಜನರು ಯಜ್ಞವನ್ನು ಮಾಡುವ ಹವ್ಯಾಸಕ್ಕೇ ಕೈಹಾಕಲಿಲ್ಲ. ದಕ್ಷನ ಮನಸ್ಸಿಗೆ ಸಮಾಧಾನವಿಲ್ಲ. ಎಂದು ಶಿವಹೀನಯಜ್ಞಮಾಡುದನ್ನು ನೋಡುವೆನೋ ಎಂದು ನನ್ನ ಅಪಮಾನದ ಹಗೆ ತೀರಿಸಿಕೊಳ್ಳುವೆನೋ ಎಂದು ಕಳವಳಿಸುತ್ತಿದ್ದ ದಕ್ಷನಿಗೆ ಹೊತ್ತೇ ಹೋಗದು. ಕಡೆಗೆ ತಾನೇ ಶಿವಹೀನಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿದನು.

ದಕ್ಷಪುರಿಯಲ್ಲಿ ಮಹಾಕೋಲಾಹಲಕ್ಕೆ ಪ್ರಾರಂಭವಾಯಿತು. ನೀಲಧಾರೆಯ ದಂಡೆಯುದ್ದಕ್ಕೂ ಮಹಾ ಯಜ್ಞಮಂಟಪವನ್ನು ನಿರ್ಮಿಸಿದರು. ಸಣ್ಣ ದೊಡ್ಡ ಗಿಡಮರಗಳನ್ನೆಲ್ಲಾ ಕಡಿದು ಕಲ್ಲುಗಳನ್ನು ಒಡೆದು ನೆಲವನ್ನು ಸಮಮಾಡಿದರು. ಲಕ್ಷಾವಧಿ ಜನರು ನೆರೆಯಬೇಕೆಂದು ದಕ್ಷಬ್ರಹ್ಮನ ಉದ್ದೇಶ. ಅಷ್ಟೆಲ್ಲ ಜನರ ಆದರೋಪಚಾರಗಳನ್ನು ಸರಿಯಾಗಿ

ಮಾಡುವುದಕ್ಕಾಗಿ ಬೇರೆ ಬೇರೆ ಅಧಿಕಾರಿಗಳನ್ನು ನಿಯಮಿಸಿದನು. ತ್ರಿಭುವನಸಂಚಾರಿಗಳಾದ ನಾರದರು ಸಕಲ ದೇವತೆಗಳನ್ನೂ ಭೂಮಿಯ ಮೇಲಣ ರಾಜರನ್ನೂ ಪ್ರಜೆಗಳನ್ನೂ ಕರೆಯುವ ಭಾರವನ್ನು ವಹಿಸಿಕೊಂಡಿದ್ದರು. ಆದರೆ ಕೈಲಾಸಪುರಿಗೆ ಮಾತ್ರ ಆಮಂತ್ರಣವನ್ನು ಹೇಳಕೂಡದೆಂದು ಅವರಿಗೆ ದಕ್ಷನ ಕಟ್ಟಪ್ಪಣೆಯಾಗಿದ್ದಿತು. ನಾರದರಿಗೆ ಮನಸ್ಸಿನಲ್ಲಿಯೇ ನಗೆಯಾಗಿದ್ದರೂ ನಗೆಬರುವ ಮಾತೇ ಸರಿ. ದೇವಾಧಿದೇವನಾದ ಕೈಲಾಸಪತಿ ಶಂಕರನನ್ನು ಕರೆಯದೆ ಯಜ್ಞವನ್ನು ಮಾಡಬೇಕೆಂಬುದು ದಕ್ಷನ ಕೋರಿಕೆ. ಇದು ಎಷ್ಟು ಅಯೋಗ್ಯವಾದುದೆಂಬುದು ಪ್ರಜಾಪತಿ ದಕ್ಷನಿಗೇ ತಿಳಿಯಲಿಲ್ಲ! ದಕ್ಷನ ಈ ಅವಿಚಾರವನ್ನು ಕೇಳಿ ದೇವತೆಗಳೆಲ್ಲರಿಗೂ ಮನಸ್ಸಿನಲ್ಲಿ ಬಹು ವಿಷಾದವಾಯಿತು. ಆದರೆ ಏನು ಮಾಡಬೇಕು? ದಕ್ಷನ ಮುಂದೆ ಹೋಗಿ ಮಾತಾಡಲು ಯಾರಿಗೆ ಧೈರ್ಯವಿರುವುದು? ಅವರೆಲ್ಲರೂ "ಏನಾಗುವುದೋ ಆಗಲಿ, ನೋಡೋಣ," ಎಂದು ಸುಮ್ಮನಾದರು. ದಕ್ಷನು ಯಜ್ಞದ ಸಿದ್ಧತೆಯಲ್ಲಿ ಅನನ್ಯಮಾನಸನಾಗಿ ತೊಡಗಿಕೊಂಡಿದ್ದನು. ಪರಿಣಾಮವೇನಾಗುವುದೋ ನೋಡಬೇಕು.

ಆದ್ಯಶಕ್ತಿ, ಜಗಜ್ಜನನೀ, ಸತೀಶಿರೋಮಣಿಯಾದ ದಾಕ್ಷಾಯಿಣಿಯ ತಂದೆ ದಕ್ಷಬ್ರಹ್ಮನ ಮನೆಯಲ್ಲಿ ಮಹಾಯಜ್ಞಸಮಾರಂಭ. ದಾಂಭಿಕನಾದ ದಕ್ಷರಾಜನು ಕೇವಲ ದಂಭದಲ್ಲಿಯೇ ಮುಳುಗಿದ್ದನು. ದಂಭದ ಹೊರತು ಸ್ನೇಹ, ಪ್ರೇಮ, ಕೋಮಲತೆ, ಔದಾರ್ಯ ಮುಂತಾದ ಸದ್ಗುಣಗಳಿಗೆ ಅವನ ಅಂತರಂಗದಲ್ಲಿ ಅವಕಾಶವೇ ಇರಲಿಲ್ಲ. ಕೇವಲ ದಂಭವನ್ನೇ ಅವಲಂಬಿಸಿಕೊಂಡು ಅವನು ಸಕಲ ಮಂಗಳಮಯನಾದ ಶಂಕರನ ಹಗೆ ತೀರಿಸಿಕೊಳ್ಳುವುದಕ್ಕಾಗಿ ಪ್ರಯತ್ನವನ್ನು ಆರಂಭಿಸಿದ್ದನು. ಈ ದಂಭದ ಮೂಲಕವಾಗಿಯೇ ಅವನ ವಿದ್ಯೆ, ಬುದ್ಧಿ, ವಿವೇಕ ಇವೆಲ್ಲಾ ಮುಸುಳಿಸಿ ಹೋಗಿದ್ದುವು. ಈ ದಂಭವೇ ಅವನ ಸರ್ವನಾಶಕ್ಕೆ ಕಾರಣವಾಯಿತು.

ಈ ಪ್ರಪಂಚವು ಕಾರ್ಯಕಾರಣ ಸೂತ್ರದಿಂದ ಸದಾ ಬದ್ಧವಾಗಿರುವುದು. ಈ ಸೂತ್ರವನ್ನು ಮೀರಿ ನಡೆಯಲು ಯಾರಿಗೂ ಸಾಧ್ಯವಿಲ್ಲ. ಆದ್ಯಶಕ್ತಿ ಮಹಾಮಾಯೆಯೇ ಈ ಕಾರ್ಯ-ಕಾರಣ-ಸೂತ್ರಕ್ಕೆ ಆಶ್ರಯಳು. ಆ ಶಕ್ತಿಯ ಯೋಗದಿಂದಲೇ ಪ್ರಪಂಚದ ಸೃಷ್ಟಿ-ಸ್ಥಿತಿ-ಲಯಗಳು ಸಂಭ

ವಿಸುವುವು. ಕೈಲಾಸಗಿರಿಯಲ್ಲಿ ಶ್ರೀಶಂಕರನ ಸನ್ನಿಧಿಯಲ್ಲಿ ಕುಳಿತಿದ್ದ ಆದ್ಯಶಕ್ತಿಯ ಅವತಾರವಾದ ದಾಕ್ಷಾಯಿಣಿಯು ತಂದೆಯ ದುರಭಿಮಾನಮೂಲಕವಾದ ಶಿವಹೀನಯಜ್ಞದ ನಿಷ್ಪತ್ತಿಯ ವಿಚಾರವನ್ನು ಹೇಗೋ ತಿಳಿದು ತಾನು ಯಾವುದಾದರೂ ಕಾರಣದಿಂದ ತಂದೆಯ ಮನೆಗೆ ಹೋಗಲೇ ಬೇಕೆಂದು ನಿರ್ಣಯಿಸಿಕೊಂಡಳು. ಆ ಮಹಾಮಾಯೆಯು ಈ ಮಾರ್ಗದಿಂದ ಜಗತ್ತಿಗೆ ತನ್ನ ಯಾವ ಉದ್ದೇಶವನ್ನು ತೋರಿಸಬೇಕೆಂದು ನಿರ್ಣಯಿಸಿಕೊಂಡಿದ್ದಳೋ ಯಾರು ಬಲ್ಲರು ?

ಈ ರೀತಿ ನಿರ್ಣಯ ಮಾಡಿಕೊಂಡ ಬಳಿಕ ಸತೀದೇವಿಯು ಪತಿದೇವನ ಬಳಿಗೆ ಬಂದು:— ಸ್ವಾಮೀ, ನನ್ನದೊಂದು ವಿಜ್ಞಾಪನೆಯಿದೆ. ತಮ್ಮ ಅಪ್ಪಣೆಯಾದರೆ ನಾನೊಮ್ಮೆ ದಕ್ಷಪುರಿಗೆ ಹೋಗಿಬರುವೆನು. ತಂದೆಯ ದುರಭಿಪ್ರಾಯವನ್ನು ದೂರಮಾಡಿ ಆತನಿಗೆ ಸನ್ಮಾರ್ಗವನ್ನು ತೋರಿಸುವುದು ನನ್ನ ಕರ್ತವ್ಯವು.

**ಪರಮೇಶ್ವರ:—** ದೇವೀ, ಈ ಸಮಯವನ್ನು ಬಿಟ್ಟು ಮತ್ತೊಂದು ವೇಳೆಯಲ್ಲಿ ಹೋಗುವುದು ಉತ್ತಮ. ಈಗ ಸಿಟ್ಟಿನ ಭರದಲ್ಲಿದ್ದ ಅವನು ನಿನಗೂ ಅಪಮಾನ ಮಾಡಬಹುದು.

**ಸತಿ:—** ನನಗೆ ಅಪಮಾನ ಮಾಡುವನೇ; ಅವನಲ್ಲಿ ನಾನೇನು ಅಪರಾಧ ಮಾಡಿದ್ದೇನೆ ?

**ಪರಮೇಶ್ವರ:—** ಸತೀ, ನೀನು ಬಹಳ ಸರಳಸ್ವಭಾವದವಳು ದಕ್ಷನ ಕಪಟವನ್ನು ನೀನರಿಯೆ. ದುರಭಿಮಾನದಿಂದ ಅಂಧನಾದ ಅವನು ಯೋಗ್ಯಾಯೋಗ್ಯ ವಿಚಾರ ಮಾಡಲಾರನು. ಆದುದರಿಂದ ನಾವು ಅಲ್ಲಿಗೆ ಹೋಗದಿರುವುದೇ ಲೇಸು. ನಾವೇ ಇಲ್ಲದ ಮೇಲೆ ಅವನು ಯಾರಿಗೆ ಅಪಮಾನ ಮಾಡುವನು ? ನಮ್ಮನ್ನು ಅಪಮಾನಪಡಿಸಲೆಂದೇ ಅವನು ಈ ಮಹಾಯಜ್ಞವನ್ನು ಹಮ್ಮಿರುವನು. ಹೀಗಿರಲು ಆದರಪೂರ್ವಕವಾಗಿ ಕರೆದ ಹೊರತು ನಾವು ಅವನ ಬಾಗಿಲಿಗೆ ಹೋಗಬಹುದೇ? ನೀನೇ ನೋಡು.

ಶಂಕರನು ಉಪಾಯಾಂತರದಿಂದ ದಾಕ್ಷಾಯಿಣಿಯ ಅಂತರಂಗದ ಅಭಿಮಾನವನ್ನು ಜಾಗ್ರತಗೊಳಿಸಿದನು. ಹಾಗೆ ಮಾಡುವುದರಿಂದಲಾದರೂ ಆಕೆಯು ಅಲ್ಲಿಗೆ ಹೋಗುವ ವಿಚಾರವನ್ನು ಬಿಡುವಳೇನೋ ಎಂದು ಆತನ

ಆಲೋಚನೆ. ಆದರೆ ಸತಿಯು ತನ್ನ ಅಂತರಂಗದಲ್ಲಿ ಒಮ್ಮೆ ಸ್ಥಿರಮಾಡಿಕೊಂಡ ವಿಚಾರವನ್ನು ಬಿಡಲಾರದೆ ಮತ್ತೊಂದು ಸಮಾಧಾನವನ್ನು ಮುಂದೆ ಮಾಡಿದಳು.

**ಸತಿ:—** ಮಗಳಿಗೆ ತಂದೆಯ ಮನೆಗೆ ಹೋಗುವುದಕ್ಕೆ ಆಮಂತ್ರಣವೇತಕ್ಕಬೇಕು? ಇದಲ್ಲದೆ ನಮ್ಮಮ್ಮನು ಅನ್ನನೀರುಗಳನ್ನು ಬಿಟ್ಟು ಬಿದ್ದಿರುವಳೆಂಬುದನ್ನು ಕೇಳಿಯೂ ನಾನು ಇಲ್ಲಿ ಹೇಗೆ ಸುಮ್ಮನೆ ಉಳಿಯಲಿ? ಇಂತಹ ಆಪತ್ತಿನಲ್ಲಿ ಅಪಮಾನಕ್ಕೆ ಅಂಜಿ ತಾಯಿಯ ದರ್ಶನಕ್ಕೆ ಹೋಗದಿರುವುದು ಹೇಗೆ?

ಈ ರೀತಿಯಾಗಿ ಸತಿಯು ಯಾವ ಉಪಾಯಕ್ಕೂ ಒಳಗಾಗದೆ ತವರ್ಮನೆಗೆ ಹೋಗಲೇಬೇಕೆಂದು ಹಟತೊಟ್ಟಿರುವುದನ್ನು ನೋಡಿ ಶಂಕರನು ವಿಶೇಷ ವಿಚಾರಮಾಡಬೇಕಾಯಿತು. ಆತನು ತನ್ನ ಜ್ಞಾನದೃಷ್ಟಿಯಿಂದ ವಿಚಾರಮಾಡಿದನು. ಏನೆಂದರೆ:— "ಈ ಕಾರ್ಯಕ್ಷೇತ್ರದಲ್ಲಿ ಆದ್ಯಶಕ್ತಿಯ ಇಚ್ಛಾನುಸಾರವಾಗಿಯೇ ಸಕಲವೂ ನಡೆಯಬೇಕಲ್ಲದೆ ಆ ಕಾರ್ಯಕಾರಣ ಸೂತ್ರದ ಹೊರಗೆ ಯಾವುದೂ ಹೋಗಲಾರದು. ಆ ಇಚ್ಛಾಮಯಿಯಾದ ಆದ್ಯಶಕ್ತಿಯ ಇಚ್ಛೆಯಿಂದಲೇ ಸಮಸ್ತ ಶುಭಾಶುಭಗಳೂ ಸದಸತ್ ಸಂಗತಿಗಳೂ ಸಂಘಟಿಸುವವಲ್ಲದೆ ಬೇರೆಯಿಲ್ಲ. ಆದುದರಿಂದ ಆಕೆಯ ಇಚ್ಛೆಯ ವಿರುದ್ಧ ಹೋಗುವುದು ಸರಿಯಲ್ಲ. ಆಗಲಿ! ಇಂದೇ ನನ್ನ ಸತಿಯ ಕೊನೆಯ ದಿನ! ಇನ್ನಿವಳ ದರ್ಶನಾಪೇಕ್ಷೆಯಿಲ್ಲ. ಮುಂದೆ ಆಗತಕ್ಕುದನ್ನೆಲ್ಲಾ ತಿಳಿದುಕೊಂಡೇ ಸತಿಯು ಈ ವಿಚಾರವನ್ನು ನನಗೆ ಹೇಳಿರುವಳು"

ಈ ರೀತಿ ಒಂದು ನಿರ್ಣಯಕ್ಕೆ ಮುಟ್ಟಿದ ಶಿವನು "ಸತೀ, ಯಜ್ಞವು ಇನ್ನೂ ಆರಂಭವಾಗಿಲ್ಲ. ಕರೆಯುವು ಬಂದರೂ ಬರಬಹುದು ಇಷ್ಟೇಕೆ ಅವಸರ! ಒಂದೆರಡು ದಿನ ನೋಡೋಣ" ಎಂದು ನುಡಿದು ಸತಿಯ ಮನಸ್ಸನ್ನು ತತ್ಕಾಲಕ್ಕೆ ಸ್ವಲ್ಪ ಸಮಾಧಾನಪಡಿಸಿದನು.



## ಎಂಟನೆಯ ಪರಿಚ್ಛೇದ



## ಉಭಯಸಂಕಟ





ಸರ್ವ ಮಂಗಳಾಶ್ರಮವಾದ ಕೈಲಾಸಗಿರಿಯಲ್ಲಿ ಋತುಭೇದವಿರಲಿಲ್ಲವೆಂದು ಒಂದೊಮ್ಮೆ ಹೇಳಿರುವೆವು. ಅಲ್ಲಿ ಸದಾ ವಸಂತಕಾಲವೇ. ಆದರೂ ಒಂದೊಂದು ಕಾಲದಲ್ಲಿ ವಿಶೇಷ ಸ್ಥಿತಿ ಕಂಡುಬರುತ್ತಿದ್ದಿತು. ಒಮ್ಮೆ ಕೈಲಾಸಗಿರಿಯ ಮೇಲಿನ ಸಕಲ ಗಿಡಗಳೂ ಚಿಗುರಿ ಎಳೆಯ ಎಲೆಗಳಿಂದ ಕಂಗೊಳಿಸುತ್ತಿದ್ದುವು. ಕೆಂಪು ಬಿಳುಪು ಹಳದಿ ಬಣ್ಣದ ಬಗೆಬಗೆಯ ಹೂಗಳ ಗೊಂಚಲುಗಳಿಂದ ಗಿಡಬಳ್ಳಿಗಳೆಲ್ಲಾ ಮುಚ್ಚಿಹೋಗಿದ್ದುವು. ಕೆಳಗೆ ಚಿಕ್ಕ ದೊಡ್ಡ ಜಲಪ್ರವಾಹಗಳು 'ಗುಳು ಗುಳು' ನಾದದೊಡನೆ ಪ್ರವಹಿಸುತ್ತಿದ್ದುವು. ಒಟ್ಟಿಗೆ ಕೈಲಾಸಗಿರಿಯ ಉಪವನವು ಹೊಸ ಹೂಗಳಿಂದಲೂ ಅವುಗಳಲ್ಲಿ ಹಾರಾಡುವ ಭ್ರಮರಗಳ ಝೇಂಕಾರದಿಂದಲೂ ಮಾಗಿದ ಹಣ್ಣುಕಾಯಿಗಳಿಂದಲೂ ಒಪ್ಪುತ್ತಿದ್ದಿತು. ಅಂಜುಳಿಗಳಾದ ಕಸ್ತೂರೀಮೃಗಗಳೂ ಎರಳೆಗಳೂ ಹೊಸ ಹುಲ್ಲಿನ ಪ್ರೀತಿಯಿಂದ ಮೇಲೆ ಮೇಲೆ ಅತ್ತಿತ್ತ ಓಡಾಡುತ್ತ ಮೇಯುತ್ತಿದ್ದುವು.

ಪರ್ವತದ ಒಂದು ಉನ್ನತ ಶಿಖರದಮೇಲೆ ಕೈಲಾಸಪತಿಯ ಅರಮನೆಯಿರುವುದು. ಸುತ್ತಲೂ ದೇವದಾರುವಿನ ಗಿಡಗಳ ದಟ್ಟಡವಿ. ಅರಮನೆಯ ಸುತ್ತಣ ಪ್ರದೇಶವು ರಮಣೀಯವಾಗಿಯೂ ಪ್ರಶಾಂತವಾಗಿಯೂ ಇದ್ದಿತು. ತಪೋವನದ ಗಾಂಭೀರ್ಯದೊಡನೆ ಉಪವನದ ಸೌಂದರ್ಯವು ಕೂಡಿದುದರಿಂದ ಆ ಸ್ಥಳವು ತಪಶ್ಚರ್ಯೆಗೂ ಪ್ರಪಂಚಕ್ಕೂ ಯೋಗ್ಯವಾಗಿದ್ದಿತು. ಅರಮನೆಯಿಂದ ಸ್ವಲ್ಪ ದೂರದಲ್ಲಿ ಶಾಖೋಪಶಾಖೆಗಳಿಂದ ವಿಸ್ತೀರ್ಣವಾದ ಒಂದು ಪ್ರಾಚೀನ ದೇವದಾರು ವೃಕ್ಷವಿದ್ದಿತು. ಅದರ ಕೆಳಗೆ ಸ್ವಯಮುದ್ಭವವಾದ ಒಂದು ವಿಶಾಲವಾದ ಹಾಸುಗಲ್ಲಿನ ನುಣುಪಾದ ಆಸನ; ಅದರ ಮೇಲೆ

ಚಿಕ್ಕದೊಂದು ಸಿಂಹಾಸನ. ಒಂದು ದಿನ ಸಾಯಂಕಾಲದಲ್ಲಿ ಕೈಲಾಸಪತಿ ಶಂಕರನು ತನ್ನ ಪ್ರಿಯ ಸತಿಯೊಡನೆ ಆನಂದದಿಂದ ಮಾತಾಡುತ್ತ ಆ ಸಿಂಹಾಸನದ ಮೇಲೊಂದು ವ್ಯಾಘ್ರಚರ್ಮವನ್ನು ಹಾಸಿಕೊಂಡು ಕುಳಿತಿದ್ದನು. ಆತನ ಬಲಭಾಗದಲ್ಲಿ ದಾಕ್ಷಾಯಿಣಿ ಮಂಡಿಸಿದ್ದಳು. ಆ ದೇವದಾರು ವೃಕ್ಷಕ್ಕೆ ಒಂದು ವನಲತೆ ಹಬ್ಬಿಕೊಂಡಿದ್ದಿತು; ಎಡಬಲಗಳಲ್ಲಿ ಚಿಕ್ಕ ದೊಡ್ಡ ಗಿಡಗಳಿದ್ದುವು. ಅದರಲ್ಲಿ ತರತರದ ಬಣ್ಣದಿಂದೊಪ್ಪುವ ಹೂಗಳ ಗೊಂಚಲುಗಳು ತುಂಬಿದ್ದುವು; ಎಲೆಯೇ ಕಾಣಿಸದು; ಬರಿಯ ಹೂವೇ! ಕೆಳಗೆ ಕುಳಿತ ದೇವದಂಪತಿಗಳ ಮೇಲೆ ಆ ಹೂಗಳು ಗಾಳಿಯಿಂದ ಒಂದೊಂದಾಗಿ ಉದಿರುವುವು. ಇದನ್ನು ನೋಡಿದರೆ ಸೃಷ್ಟಿದೇವತೆಯು ಪ್ರೇಮದಿಂದ ಆ ದೇವದಂಪತಿಗಳನ್ನು ಪೂಜಿಸುವಳೋ ಎಂಬಂತೆ ತೋರುವುದು. ಆ ಸಂಧ್ಯಾಕಾಲದ ಮನೋಹರವಾದ ಪ್ರಕಾಶದಲ್ಲಿ ಶಿವನ ಶುಭ್ರಮೂರ್ತಿ ಕಂಗೊಳಿಸುತ್ತಿದ್ದಿತು. ಜಗತ್ತಿನ ಕಲ್ಯಾಣಕರ್ತನಾದ ಶಿವನು ಆ ಸಮಯದಲ್ಲಿ ತನ್ನ ಪ್ರಿಯ ಪತ್ನಿ ದಾಕ್ಷಾಯಿಣಿಯೊಂದಿಗೆ ಪ್ರಪಂಚದ ಜೀವರಾಶಿಯ ಸುಖದುಃಖಗಳ ವಿಚಾರವನ್ನು ಮಾಡುತ್ತಿದ್ದನು. ಅಷ್ಟರಲ್ಲಿ ಸೂರ್ಯನು ಅಸ್ತಂಗತನಾದನು. ಆಗ ಪರಮೇಶ್ವರನು ಅತ್ತ ಬೆರಳು ತೋರಿ:—

**ಪರಮೇಶ್ವರ:**— ಸತೀ! ನೋಡಿದೆಯಾ? ಜಗತ್ತಿನ ನೇತ್ರಸ್ವರೂಪಿಯಾದ ಸೂರ್ಯದೇವನು ತನ್ನ ಉಜ್ವಲಕಿರಣಗಳಿಂದ ಇದುವರೆಗೆ ಜಗತ್ತನ್ನು ಪ್ರಕಾಶಿಸುತ್ತಿದ್ದನು. ಈಗಲಾ ದಿನಮಣಿಯ ತೇಜವು ಅಡಗಿಹೋಯಿತು. ನೋಡುನೋಡುತ್ತ ಅವನು ತೇಜೋಹೀನನಾಗಿ ಅದೃಶ್ಯನಾದನು. ಪೃಥ್ವಿಯಲ್ಲಿಯ ಮಾನವರ ಸ್ಥಿತಿಯೂ ಇದೇ ಪ್ರಕಾರವಿರುವುದು. ಈ ದಿನ ಯಾವನು ಅಧಿಕಾರ-ಜ್ಞಾನ-ಗೌರವಗಳಿಂದ ಪ್ರಕಾಶಿಸುತ್ತಿರುವನೋ ಅವನು ನಾಳೆ ದಾರಿದ್ರ್ಯಾದಿ ತಾಪಗಳಿಂದ ಆವೃತನಾಗಿ ಅದೃಶ್ಯನಾಗಿ ಹೋಗುವನು. ಆದರೆ ಮೂಢ ಮಾನವನ ಭ್ರಾಂತಿಯೆಷ್ಟು ನೋಡಿದೆಯಾ? ಈ ನಶ್ವರವಾದ ತನ್ನ ದೇಹವೂ ತನ್ನ ಸಿರಿಸಂಪತ್ತುಗಳೂ ಸ್ಥಿರವೆಂದು ನಂಬಿ ಹಮ್ಮಿನಿಂದ ಧರ್ಮವನ್ನು ಮರೆಯುವನು; ಸತ್ಕಾರ್ಯಗಳನ್ನು ಅಲಕ್ಷ್ಯಮಾಡುವನು. ಪರೋಪಕಾರವೇ ಪರಮಪದದಾಯಕವಾದ ಶ್ರೇಷ್ಠಧರ್ಮಕಾರ್ಯವೆಂಬುದು ಅವನ ಸ್ಮರಣೆಗೂ ಬಾರದು.

**ಸತಿ:—** ಜಗತ್ಪಿತನೇ, ಸೂರ್ಯನು ಈಗ ಅಸ್ತಂಗತನಾದರೆ ನಾಳೆ ಮತ್ತೆ ಉದಯಹೊಂದುವನು. ಈ ವಿಷಯದಲ್ಲಿ ಮಾನವನ ಸ್ಥಿತಿಯೆಂತು?

**ಪರಮೇಶ್ವರ:—** ದೇವೀ, ಸಾಮಾನ್ಯ ಜನರು ಯಾವುವು ಜನನ ಮರಣಗಳೆಂದು ಭಾವಿಸುವರೋ ಅವನ್ನೇ ಜ್ಞಾನಿಗಳು ಉದಯಾಸ್ತಗಳೆಂದು ಹೇಳುವರು. ಆದರೆ ಈ ವಿಷಯದಲ್ಲಿ ಒಂದು ತಾರತಮ್ಯವಿದೆ. ಸೂರ್ಯನಿಗೆ ಪುನಃಪುನಃ ಉದಯಾಸ್ತಗಳಾದರೂ ಆತನ ತೇಜಸ್ಸಿನಲ್ಲಿ ಹೆಚ್ಚು ಕಡಿಮೆಯಾದಂತೆ ಕಂಡುಬರು ದಿಲ್ಲ; ಮನುಷ್ಯಪ್ರಾಣಿಯ ಸ್ಥಿತಿ ಮಾತ್ರ ಹೀಗಿಲ್ಲ. ಅವನು ತನ್ನ ಕರ್ಮಾನುಗುಣವಾಗಿ ಅಧಿಕ ತೇಜಃಶಾಲಿಯಾಗಿಯಾಗಲಿ, ಇದ್ದ ತೇಜಸ್ಸನ್ನು ಕಳೆದುಕೊಂಡಾಗಲಿ ಪುನಃ ಉದಯನಾಗುವನು. ಮನುಷ್ಯನು ಜನ್ಮಜನ್ಮದಲ್ಲಿ ಜ್ಞಾನಸಂಗ್ರಹವನ್ನು ಹೆಚ್ಚಿಸಿಕೊಂಡಂತೆ- ಅಧಿಕ ಸುಶೀಲನೂ ಸದಾಚಾರಿಯೂ ಆದಂತೆ- ಮುಂದಿನ ಜನ್ಮದಲ್ಲಿ ವಿಶೇಷ ತೇಜಸ್ವಿಯಾಗಿ ಹುಟ್ಟುವನು; ಜ್ಞಾನ-ಧರ್ಮಗಳನ್ನು ಬಿಟ್ಟು ನಡೆಯುವವನು ಅವನತಿಯನ್ನು ಹೊಂದುವನು.

**ಸತಿ:—** ಇರಲಿ, ಪ್ರಭುವೇ, ನೀವು ಹೇಳುವ ವಿಚಾರವನ್ನು ಕೇಳಿದರೆ ಮನುಷ್ಯನ ಆತ್ಮವು ಅಜರಾಮರವೆಂದು ತೋರುತ್ತದೆ. ಅದು ಅವನವನ ಕರ್ಮಕ್ಕೆ ತಕ್ಕ ಫಲಗಳನ್ನು ಅನುಭವಿಸುವುದಕ್ಕಾಗಿ ತೇಜಸ್ವಿಯಾದ ಇಲ್ಲವೆ ಅವನತಸ್ಥಿತಿಯ ದೇಹವನ್ನು ಧರಿಸಿ ಈ ಪ್ರಪಂಚವೆಂಬ ನಾಟಕ ಶಾಲೆಯಲ್ಲಿ ಬಂದು ನಾಟ್ಯಮಾಡಿ ಮರೆಯಾಗುವುದು; ಪುನಃ ಹೊರಗೆ ಬರುವುದು, ಎಂದಂತಾಯಿತು. ಒಳ್ಳೆಯದು. ಸತಿಯರಿಗೆ ಪಾತಿವ್ರತ್ಯವೇ ಪರಮಭೂಷಣವೆಂದು ಹೇಳಿರುವರಷ್ಟೇ; ಅಂತಹ ಪತಿವ್ರತಾಸ್ತ್ರೀಯ ನಡತೆ ಎಂತಿರಬೇಕು?

**ಪರಮೇಶ್ವರ:—** ದೇವೀ, ಸತಿಗೆ ಪತಿಯಿಂದ ಬೇರೆಯಾದ ದೇವರಿಲ್ಲ. ಪತಿಸೇವೆಯಲ್ಲದೆ ಬೇರೆ ವ್ರತೋಪವಾಸಗಳಿಲ್ಲ. ಪತಿಯ ಮನಸ್ಸಿನ ಸಮಾಧಾನವನ್ನು ಕಾಯ್ದುಕೊಳ್ಳುವುದಲ್ಲದೆ ಬೇರೆ ಅನುಷ್ಠಾನವಿಲ್ಲ. ಆತನ ಮನಸ್ಸಿಗೆಬಾರದ ನುಡಿಗಳನ್ನು ಅವಳು ಎಂದೆಂದೂ ಆಡಲಾಗದು. ಅವನಿಗೆ ಸೇರದ ಸಂಗತಿಯನ್ನು ಎಂದೂ ಮನಸ್ಸಿನಲ್ಲಿಯೂ ತರಬಾರದು. ಅವನಿಗೆ ಎಲ್ಲ ಕಾರ್ಯಗಳಲ್ಲಿ ನೆರವಾಗಬೇಕು. ಈ ಪ್ರಪಂಚದಲ್ಲಿ ಸತಿಪತಿಗಳು ರಥಕ್ಕೆ

ರುವ ಎರಡು ಗಾಲಿಗಳಂತಿರುವರು. ಅಥವಾ ಮನುಷ್ಯನ ಮುಖದ ಮೇಲಿನ ಎರಡುಕಣ್ಣುಗಳಂತಿರುವರು. ರಥದ ಒಂದು ಗಾಲಿ ತಿರುಗಿದರೆ ಇನ್ನೊಂದು ಗಾಲಿಯೂ ತಿರುಗಲೇಬೇಕು. ಅದರಂತೆ ಒಂದು ಕಣ್ಣು ಒಂದು ಪದಾರ್ಥ ವನ್ನು ಒಂದು ಭಾವನೆಯಿಂದ ನೋಡುತ್ತಿದ್ದರೆ ಮತ್ತೊಂದು ಕಣ್ಣು ಆ ಪದಾರ್ಥವನ್ನು ಬೇರೊಂದು ಭಾವನೆಯಿಂದ ಎಂದೂ ನೋಡಲಾರದು. ಬಹಳ ಹೇಳುವುದೇನು ? ಸತಿಗೆ ಪತಿಯಲ್ಲಿ ಅನನ್ಯವಾದ ಅನುರಾಗವಿರ ಬೇಕು. ಆ ಅನುರಾಗವೇ ಪತಿಯು ಕಣ್ಣೆದಿರಿನಲ್ಲಿರುವಾಗ ಪ್ರೇಮ ರೂಪವಾಗಿಯೂ, ಕಣ್ಮರೆಯಾಗಿರುವಾಗ ಭಕ್ತಿರೂಪವಾಗಿಯೂ ಪರಿಣಮಿ ಸಬೇಕು, ಆಗಲೇ ಸಾಮಾನ್ಯ ಮಾನವಸ್ತ್ರೀಯರೂ ನಿನ್ನ ಸಮಾನ ಯೋಗ್ಯತೆ ಯವರೆನ್ನಿಸಿಕೊಳ್ಳುವರು. ಬಲ್ಲೆಯಾ ? ಸತಿಯು ಹೀಗೆ ಸನ್ಮಾರ್ಗದಿಂದ ನಡೆದ ಮಾತ್ರದಿಂದಲೇ ಅವರ ಸಂಸಾರವು ಸುಖಕರವಾಗಲಾರದು. ಸತಿ ಯಂತೆಯೇ ಪತಿಯೂ ತನ್ನ ಪ್ರೇಮದ ಪತ್ನಿಯಲ್ಲಿ ಅನನ್ಯಭಾವದಿಂದ ನಡೆದುಕೊಳ್ಳಬೇಕು, ಹೀಗಾದರೆಮಾತ್ರ ಅವರ ಸಂಸಾರವು ನಿಜವಾದ ಸುಖದ ಆಗರವಾಗುವುದು.

**ಸತಿ:**—ಜಗತ್ಪಿತನೇ, ಸುಖದುಃಖಗಳ ವಿಚಾರವಾಯಿತು; ಜನನ ಮರಣಗಳ ವಿಚಾರವಾಯಿತು. ಪತಿವ್ರತಾ ಧರ್ಮದ ವಿಚಾರವಾಯಿತು. ಇನ್ನು ಜನರು ಧರ್ಮ, ಧರ್ಮ, ಎನ್ನುತ್ತಿರುವ ಆ ಸರ್ವಸಾಮಾನ್ಯವಾದ ಧರ್ಮದ ಸಾರರೂಪವಾದ ಒಂದು ಮಾತನ್ನು ಹೇಳಬಲ್ಲಿರಾ ?

**ಪರಮೇಶ್ವರ:**— ಸತೀ, ಸಾವಿರಮಾತಿನಿಂದ ಫಲವೇನು ?

**आहारनिद्राभयमैथुनं च, सामान्यमेतत् पशुभिर्नराणाम् ॥**
**धर्मोहि तेषामधिको विशेषो, धर्मेण हीनाः पशुभिः समानाः ॥**

ಎಂದರೆ ಆಹಾರ, ನಿದ್ರೆ, ಭಯ, ಮೊದಲಾದುವು ಪಶುಗಳಿಗೆ ಇರುವಂತೆಯೇ ಮನುಷ್ಯನಿಗೂ ಇರುವುವು. ಆದರೆ ಧರ್ಮವೊಂದು ಮನುಷ್ಯನಿಗೆ ಹೆಚ್ಚಿನ ದಾಗಿದೆ. ಆ ಧರ್ಮವನ್ನು ಬಿಟ್ಟನೆಂದರೆ ಮನುಷ್ಯನು ಪಶುಗಳಂತೆಯೇ ಆಗುವನು. ಧರ್ಮದ ರಹಸ್ಯವನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ ಹೀಗೆ ಹೇಳಬೇಕಾಗುವುದು:— **“ ಪರೋಪಕಾರಃ ಪುಣ್ಯಾಯ, ಪಾಪಾಯ ಪರಪೀಡನಂ ”** ಪರೋಪಕಾರಕ್ಕೆ ಭೂತದಯೆ ಎಂದರೆ



ಪತಿಯ ಅರ್ಧಾಸನದಲ್ಲಿ ಕುಳಿತಿದ್ದ
ಸತಿಯು ........... ಕೆಳಗಿಳಿದು ಕುಳಿತಳು.

ಸಕಲಪ್ರಾಣಿಗಳನ್ನೂ ತನ್ನಂತೆಯೇ ಭಾವಿಸುವುದು, ಇದೇ ಮೂಲಾಧಾರವು ಇದನ್ನು ಸದಾ ನೆನಪಿನಲ್ಲಿಟ್ಟುಕೊಂಡು ನಡೆಯಬೇಕು.

ಇಂತು ಆ ದೇವದಂಪತಿಗಳು ಜಗತ್ಕಲ್ಯಾಣಕರವಾದ ಸಂಭಾಷಣೆಯಲ್ಲಿ ನಿಮಗ್ನರಾಗಿರುವಾಗ ದೂರದಲ್ಲಿ ನಾರದಮುನಿಗಳ ವೀಣಾನಾದದೊಂದಿಗೆ ಹರಿನಾಮಸ್ಮರಣೆ ಕೇಳಿಸಿತು.

ನಾರದರು ಬಂದು ಜಗತ್ಕಲ್ಯಾಣಕರನಾದ ಶಂಕರನ ಪಾದಗಳಿಗೆ ವಂದಿಸಿದರು. ಶಂಕರನು ನಾರದರನ್ನು ಎತ್ತಿ ಉಚಿತಾಸನದಲ್ಲಿ ಕುಳ್ಳಿರಲು ಹೇಳಿದನು. ಇಷ್ಟು ಹೊತ್ತಿನವರೆಗೆ ಪತಿಯ ಅರ್ಧಾಸನದಲ್ಲಿ ಕುಳಿತಿದ್ದ ಸತಿಯು ಚಿಕ್ಕಪ್ಪನು ಬಂದೊಡನೆಯೇ ನಾಚಿಕೊಂಡು ಕೆಳಗಿಳಿದು ಕುಳಿತಳು. ಮದುವೆಯಾದ ಬಳಿಕ ತವರ್ಮನೆಯವರಾಗಿ ಕೈಲಾಸಗಿರಿಗೆ, ಸತಿಯ ಪತಿಗೃಹಕ್ಕೆ ಬಂದವರೆಂದರೆ ನಾರದರೊಬ್ಬರೇ; ಅದೂ ಇಂದೇ ಬಂದಿದ್ದರು. ಸತಿಗೂ ಜಗತ್ಪಿತನಾದ ಕೈಲಾಸಪತಿಯ ಸಹವಾಸದಲ್ಲಿರುವಾಗ ತಾಯಿಯ ಮನೆಯ ನೆನಪೇ ಆಗಿರಲಿಲ್ಲ. ಒಮ್ಮೊಮ್ಮೆ ನೆನಪಾದರೂ ಅದನ್ನು ಮರೆತುಬಿಡುವಳು. ಏಕೆಂದರೆ, ಪತಿಗೃಹದಲ್ಲಿರುವ ಸತಿಯು ತವರ್ಮನೆಯ ಸುಖಸಂಪದಗಳನ್ನು ಸ್ಮರಿಸಿಕೊಂಡು ಕಾರಣಾಂತರದಿಂದಲೂ ದುಃಖವನ್ನು ತಳೆಯಕೂಡದೆಂಬ ಸತೀಧರ್ಮವು ಆಕೆಯ ಅಂತರಂಗದಲ್ಲಿ ಸದಾ ವಾಸವಾಗಿದ್ದಿತು. ಇಂದು ಚಿಕ್ಕಪ್ಪನು ಅಕಸ್ಮಾತ್ತಾಗಿ ಬಂದುದನ್ನು ನೋಡಿ ಆಕೆಗೆ ತವರ್ಮನೆಯ ನೆನಪಾಯಿತು. ಆಕೆಯು ತಾಯಿಯ, ತಂದೆಯ, ಬಂಧುಭಗಿನಿಯರ, ತವರ್ಮನೆಯ ದಾಸದಾಸಿಯರ, ತನ್ನ ಪ್ರೀತಿಯ ಶಿವಮಂದಿರದ, ಬಿಲ್ವವೃಕ್ಷದ, ನೀಲಧಾರೆಯ, ಅಲ್ಲಿಯ ಮಳಲರಾಶಿಯ ವೃತ್ತಾಂತಗಳನ್ನೆಲ್ಲಾ ಕೇಳಿದಳು. ನಾರದರು ಎಲ್ಲರ ಸುಖಸಮೃದ್ಧಿಗಳನ್ನು ಉಸಿರಿದರು. ಸತಿಗೆ ಪರಮಾನಂದವಾಯಿತು. ಆಕೆ ಮತ್ತೇನು ಸಮಾಚಾರವೆಂದಳು. ನಾರದರು ನಗುತ್ತ 'ಮಗೂ ಹೇಳುವುದೇನು? ನಿಮ್ಮ ತಂದೆಯು ಒಂದು ಮಹಾಯಜ್ಞವನ್ನು ಹವಿಸ್ಮಿರುವನು. ಆ ಯಜ್ಞದ ಆಮಂತ್ರಣವನ್ನು ಕೊಡುವುದಕ್ಕಾಗಿ ನಾನು ಹದಿನಾಲ್ಕು ಲೋಕಗಳಲ್ಲಿಯೂ ತಿರುತಿರುಗಿ ದಣಿದೆನು' ಎಂದರು. ತವರ್ಮನೆಯಲ್ಲಿಯ ಯಜ್ಞಸಮಾರಂಭಕ್ಕೆ ನಾರದರು ತನ್ನನ್ನು ಕರೆದುಕೊಂಡು ಹೋಗಲು ಬಂದಿರುವರೆಂದು ಆಕೆಯು ತಿಳಿದು

ಕೊಂಡಳು. "ನನ್ನನ್ನು ಕರೆದುಕೊಂಡು ಹೋಗಲು ಬಂದಿರುವಿರಾ? ನಾನು ಎಲ್ಲವನ್ನೂ ಅಣಿಮಾಡಿಕೊಳ್ಳುತ್ತೇನೆ. ನಾಳೆಯೇ ಹೊರಡೋಣ." ಎಂದಳು.

ನಾರದರಿಗೆ ಬಲು ಪೇಚಾಟವಾಯಿತು. ಕೈಲಾಸಪುರಿಗೆ ಆಮಂತ್ರಣವನ್ನು ಹೇಳಕೂಡದೆಂದು ದಕ್ಷನ ಕಟ್ಟಪ್ಪಣೆಯಾಗಿದ್ದಿತು. ಸತಿಯಾದರೊ ತನ್ನನ್ನು ಕೇಳದೆಯೇ ಹೊರಟುಬರಲು ಸಿದ್ಧಳಾದಳು. ಕರೆದುಕೊಂಡು ಹೋಗೋಣವೇ? ಬಿಟ್ಟು ಹೋಗೋಣವೇ ? ಎರಡೂ ಆಗದ ಮಾತು. ಈ ರೀತಿಯಾಗಿ ನಾರದರು ವಿಚಾರಮಾಡುತ್ತಿರಲು ಅವರ ಮುಖದಲ್ಲಿ ಚಿಂತೆಯ ಛಾಯೆಯು ಒಡಮೂಡಿತು. ಅವರು ದುಃಖದಿಂದ ತಪ್ಪುತ್ತ ತಡೆಯುತ್ತ, "ಇಲ್ಲವಮ್ಮಾ; ನಿನ್ನನ್ನು ಕರೆದುಕೊಂಡು ಹೋಗಲು ನಾನು ಬಂದಿಲ್ಲ." ಎಂದರು. ಈ ಸ್ಥಿತಿಯನ್ನೆಲ್ಲ ನೋಡುತ್ತ ಸಮೀಪದಲ್ಲಿದ್ದ ನಂದಿಯು—"ಸ್ವಾಮೀ ಹೀಗೆಂದರೇನು ? ತಾವು ಸುಮ್ಮನೆ ಆಮಂತ್ರಣವನ್ನು ಮಾತ್ರ ಕೊಡಲು ಬಂದಿರುವಿರೇ ? ಹಾಗಿದ್ದರೆ ನಾನೇ ಅಮ್ಮನವರ ಸಂಗಡ ಬರುವೆನು." ಎಂದನು.

ನಾರದರು ಗಟ್ಟಿಮನಸ್ಸುಮಾಡಿ "ಇಲ್ಲ, ಅದಕ್ಕಾಗಿ ಅಲ್ಲ." ಎನ್ನುತ್ತ ಮುಖವನ್ನು ತಗ್ಗಿಸಿಕೊಂಡು ಕುಳಿತರು. ನಾರದರ ಸ್ಥಿತಿಯನ್ನು ನೋಡಿ ಎಲ್ಲರಿಗೂ ಸಂಶಯವುಂಟಾಯಿತು.

**ಪರಮೇಶ್ವರ:—** "ನಾರದರೇ ನಡೆದಿರುವುದಾದರೂ ಏನು ? ಏಕೆ ಸ್ಪಷ್ಟವಾಗಿ ಹೇಳುವುದಿಲ್ಲ ?" ಎಂದನು.

**ನಾರದರು:—** "ವಿಶೇಷವೇನೂ ಇಲ್ಲ. ಗರ್ವಾಂಧನಾದ ದಕ್ಷನು ಶಿವಹೀನ ಯಜ್ಞವನ್ನು ಮಾಡಬೇಕೆಂದು ನಿಶ್ಚಯಿಸಿರುವನು. ಶಿವಹೀನ ಯಜ್ಞದ ಫಲವಾದರೂ ಶಿವ ( ಕಲ್ಯಾಣ ) ಹೀನವಾದುದೇ ಆಗುವುದರಲ್ಲಿ ಸಂದೇಹವಿಲ್ಲ. ಅವನು ಹದಿನಾಲ್ಕುಲೋಕದ ಜನರಿಗೂ ಅಕ್ಷತೆಯನ್ನು ಕಳುಹಿರುವನಾದರೂ ಕೈಲಾಸಪುರಿಗೆ ಮಾತ್ರ ಆಮಂತ್ರಣ ಹೇಳಕೂಡದೆಂದು ಕಟ್ಟಪ್ಪಣೆ ಮಾಡಿರುವನು. ಸಕಲರಿಗೂ ಆಮಂತ್ರಣಕೊಡುವ ಭಾರವನ್ನು ನಾನು ವಹಿಸಿಕೊಂಡಿದ್ದೆನು. ಆದುದರಿಂದ ಈ ಸಂಗತಿಯನ್ನು ತಮಗೆ ತಿಳಿಸಿ ಕ್ಷಮೆಯನ್ನು ಬೇಡಿಕೊಳ್ಳಬೇಕೆಂದು ಬಂದಿದ್ದೇನೆ." ಹೀಗೆಂದು ಶಂಕರನ ಪಾದಗಳಿಗೆ ಎರಗಿದರು.

ಪರಮೇಶ್ವರನಿಗೆ ಹಿಡಿಸಲಾರದಷ್ಟು ನಗೆ ಬಂದಿತು. ಆತನು "ಓ! ಇಷ್ಟೇ ಅಲ್ಲವೇ, ಆತನ ಯಜ್ಞಸಮಾರಂಭವು ಯಾರಿಗೆ ಬೇಕಾಗಿದೆ? ಎಲ್ಲವೂ ಆನಂದದಿಂದ ನಡೆಯಲಿ. ನಮಗಿದು ಮೊದಲೇ ಗೊತ್ತಿದೆ." ಎಂದುಬಿಟ್ಟನು.

ಸತಿಗೆ ಮಾತ್ರ ಈ ಮಾತಿನಿಂದ ಬಹು ದುಃಖವಾಯಿತು. ಆಕೆ ಅಳುತ್ತ "ಅಹಹಾ! ಎಂತಹ ದುರ್ಬುದ್ಧಿಯಿದು? ಶಿವಹೀನಯಜ್ಞವು ಎಂದಾದರೂ ಮಂಗಳಕರವಾಗಬಹುದೇ? ವಿನಾಶಕಾಲಕ್ಕೇ ಇಂತಹ ವಿಪರೀತಬುದ್ಧಿ ಹುಟ್ಟಿತು. ಮುಂದೇನು ಗತಿ?" ಎಂದಳು.

**ನಾರದ:—** ಮಗೂ, ನೀನರಿಯದಿರುವುದು ಒಂದೂ ಇಲ್ಲ. ಸರ್ವಮಂಗಳೆಯು ಯಾವಾತನ ಮಗಳೋ ಸರ್ವಮಂಗಳಮಯನಾದ ಶಂಕರನು ಯಾವಾತನ ಅಳಿಯನೋ ಅವನಿಗೆ ಅಮಂಗಳದ ಭಯವೇತರದು? ನಿನ್ನ ಮನಸ್ಸಿಗೆಬಂದಹಾಗೆ ನಡೆದುಕೊಳ್ಳಬಹುದು. ಹೀಗೆಂದು ನುಡಿದು ನಾರದರು ಹೊರಟುಹೋದರು. ಸತಿಗೆ ಉಭಯಸಂಕಟವು ಪ್ರಾಪ್ತವಾಯಿತು. ಒಂದು ಕಡೆಗೆ ಪರಮಪೂಜ್ಯ-ಸದಾ ಆರಾಧ್ಯ-ಪತಿದೇವನ ಅಪಮಾನ; ಆತನಿಗೆ ಯಜ್ಞದಲ್ಲಿ ಸಲ್ಲತಕ್ಕ ಹವಿರ್ಭಾಗವಿಲ್ಲ; ಆತನು ದೇವಗಣದಿಂದ ಬಹಿಷ್ಕೃತನಾಗುವನು. ಮತ್ತೊಂದು ಕಡೆಗೆ ಹಡೆದ ತಂದೆ, ಪಿತೃದೇವನ ಅಮಂಗಳದ ಸೂಚನೆಯಾಯಿತು. ಅಭಿಮಾನಾಂಧನಾದ ತಂದೆಯು ಮಂಗಲಮಯನಾದ ಮಂಗಲಾಧಾರನಾದ ಮಹಾದೇವನನ್ನು ಬಿಟ್ಟು ಯಜ್ಞಮಾಡಲು ತೊಡಗಿರುವನು! ಏನು ಮಾಡಬೇಕು? ಹೇಗೆ ಮಾಡಬೇಕು? ಎಂಬುದೇ ಸತಿಗೆ ತೋಚದು. ಕೊನೆಗೆ ಹಿಂದೆ ನಿರ್ಣಯಿಸಿಕೊಂಡಂತೆ ಆಕೆ ದಕ್ಷಪುರಿಗೆ ಹೊರಡಲು ಸಿದ್ಧತೆಮಾಡಿಕೊಂಡಳು.

ಶಂಕರನೂ ತುಂಬ ವಿಚಾರಮಾಡಿ ಸತಿಗೆ ತವರ್ಮನೆಗೆ ಹೋಗಲು ಅನುಮತಿಯನ್ನು ಕೊಟ್ಟನು.

ಪತಿದೇವನಿಂದ ಅಪ್ಪಣೆಯನ್ನು ಪಡೆದುಕೊಂಡ ದಾಕ್ಷಾಯಿಣಿಯು ಸಂಗಡ ನಂದಿಯನ್ನು ಕರೆದುಕೊಂಡು ದಕ್ಷಪುರಿಗೆ ಹೊರಟಳು. ದಾರಿಯಲ್ಲಿ ನಂದಿಯು:— ಅಮ್ಮಾ! ಐಶ್ವರ್ಯಪ್ರಿಯರಾದ ನಿಮ್ಮ ತವರ್ಮನೆಯವರು ನಿಮ್ಮ ಈ ಯೋಗಿನಿಯ ವೇಷವನ್ನು ನೋಡಿ ದುಃಖಪಟ್ಟಾರು. ಅವರಿಗೆ ಕೈಲಾಸಪತಿ ಶ್ರೀಶಂಕರನ ವಿಷಯವಾಗಿ ಒಂದು ಬಗೆಯ ಅನಾದರವೂ

ಹುಟ್ಟದಿರದು. ಆದುದರಿಂದ ನೀವು ಕೈಲಾಸಗಿರಿಯಲ್ಲಿ ಶಿವನಪತ್ನಿಗೆ ಒಪ್ಪುವ ಯೋಗಿನಿಯ ವೇಷದಿಂದಲೇ ಇರುತ್ತಿದ್ದರೂ ದಕ್ಷಪುರಿಗೆ ತೆರಳುವಾಗ ದಾಕ್ಷಾಯಿಣಿಯ ವೇಷದಿಂದಲೇ ಹೋಗಬೇಕು. ವಿಲಾಸಪ್ರಿಯರಾದ ಅವರ ಮುಂದೆ ಹೋಗುವಾಗ ವಿಲಾಸದ ಒಡವೆಗಳನ್ನು ಧರಿಸಿಕೊಂಡು ಹೋಗುವುದು ಒಳ್ಳೆಯದು. ಈ ವಿಧದ ವಸ್ತ್ರಾಲಂಕಾರಗಳಿಂದ ನಮಗಾಗಲಿ ಶ್ರೀಶಂಕರನಿಗಾಗಲಿ ಯಾವ ವಿಧದ ಸಮಾಧಾನವೇ ಆಗಲಿ, ಸಂತೋಷವೇ ಆಗಲಿ ಹುಟ್ಟಲಾರದೆಂಬುದು ಸತ್ಯವೇ ಸರಿ. ಆದರೆ ಅವುಗಳಿಂದ ಇತರರಿಗೆ ಆನಂದವಾಗುತ್ತಿದ್ದರೆ ನಮಗೆ ಅದರಿಂದ ಆಗುವ ಹಾನಿಯಾದರೂ ಏನು?'' ಎಂದನು.

ನಂದಿಯ ಸಯುಕ್ತಿಕ ವಿಚಾರವು ದಾಕ್ಷಾಯಿಣಿಗೆ ಸರಿಯಾಗಿ ತೋರಿತು. ಆಕೆಯು ಕೂಡಲೆ ಕುಬೇರನನ್ನು ಸ್ಮರಿಸಿದಳು. ಕುಬೇರನು ಆದಿ ಮಾಯೆಯ ಇಚ್ಛಾನುಸಾರವಾಗಿ ಅಮೂಲ್ಯ ರತ್ನಾಲಂಕಾರಗಳನ್ನೂ ಉಡುಗೆತೊಡುಗೆಗಳನ್ನೂ ತಂದುಕೊಟ್ಟನು. ದಾಕ್ಷಾಯಿಣಿಗೆ ನಂದಿಯ ಅಭಿಪ್ರಾಯದ ಮೇರೆಗೆ ಆ ವಸ್ತ್ರಾಲಂಕಾರಗಳನ್ನು ಧರಿಸುವ ಇಚ್ಛೆಯಿದ್ದಿತು. ಆದರೆ ತನ್ನ ಪ್ರೀತಿಯ—ತನ್ನ ಪತಿಯ ಪ್ರೀತಿಯ ಯೋಗಿನಿಯ ವೇಷವನ್ನು ತೆಗೆದೊಗೆಯಲಿಕ್ಕೆ ಮಾತ್ರ ಆಕೆಯ ಮನಸ್ಸು ಒಪ್ಪಲಿಲ್ಲ. ಆದುದರಿಂದ ಆಕೆಯು ತನ್ನ ಮೊದಲಿನ ಯೋಗಿನಿಯ ವೇಷವನ್ನು ಹಾಗೆಯೇ ಇಟ್ಟು ಕೊಂಡು ಮೇಲೆ ವಸ್ತ್ರಾಲಂಕಾರಗಳನ್ನು ಧರಿಸಬೇಕೆಂದು ನಿರ್ಣಯಿಸಿದಳು. ನಾರುಬಟ್ಟೆಯ ಮೇಲೆ ಜರತಾರಿಯ ಸೀರೆಯನ್ನುಟ್ಟಳು. ರುದ್ರಾಕ್ಷಮಾಲೆ ಮರೆಯಾಗುವಂತೆ ರತ್ನದ ಹಾರಗಳನ್ನು ಧರಿಸಿದಳು. ವಿಭೂತಿಯ ಮೇಲೆ ಕುಂಕುಮವನ್ನಿಟ್ಟುಕೊಂಡಳು. ಬಿಲ್ವಪತ್ರ ಜವಾಕುಸುಮಗಳ ಮೇಲೆ ರತ್ನ ಕಿರೀಟವನ್ನು ಧರಿಸಿದಳು. ಅಂತೂ ರಾಜರಾಜೇಶ್ವರಿಯ ವೇಷದಿಂದ ತನ್ನ ಶರೀರವನ್ನು, ತನ್ನ ನಿಜವೇಷವನ್ನು ಮರೆಮಾಡಿದಳು. ಅದನ್ನು ನೋಡಿ ನಂದಿಯು "ಆಹಾ! ಈಗ ಮಾತ್ರ ನಮ್ಮ ಅಮ್ಮನವರು ನಿಜವಾದ ದಕ್ಷ ಪುತ್ರಿಯ ಹಾಗೆ ಕಾಣಿಸುವರು. ದಕ್ಷನಿಗೆ ತಕ್ಕ ದಾಕ್ಷಾಯಿಣಿಯ ವೇಷ ವಿದು.'' ಎಂದನು.



## ಒಂಬತ್ತನೆಯ ಪರಿಚ್ಛೇದ



# ಪರಿಸಮಾಪ್ತಿ





ದಾಕ್ಷಾಯಿಣಿಯು ತನಗೆ ಸೇರದಿದ್ದರೂ ತಂದೆತಾಯಿಗಳ ಪ್ರೀತಿಗಾಗಿ ಬಗೆಬಗೆಯ ಕೃತ್ರಿಮ ಅಲಂಕಾರಗಳಿಂದ ತನ್ನ ನಿಜವೇಷವನ್ನು ಮರೆಮಾಡಿಕೊಂಡು ದಕ್ಷಪುರಿಗೆ ಬಂದಳು. ಆಕೆಯು ಪೊತ್ತ್ತಸೊದಲು ಅಂತಃಪುರದಲ್ಲಿದ್ದ ತಾಯಿಯ ಬಳಿಗೆ ಹೋದಳು. ಅಲ್ಲಿ ದಕ್ಷಪತ್ನಿಯು ಪ್ರೀತಿಯಮಗಳಾದ ಸತಿಯನ್ನು ನೆನೆನೆನೆದು ಕಣ್ಣೀರು ಸುರಿಸುತ್ತ ಮಲಗಿಕೊಂಡಿದ್ದಳು. ಅರಮನೆಯಲ್ಲಿ ಮಹಾ ಯಜ್ಞಸಮಾರಂಭವು ನಡೆಯುತ್ತಿದ್ದರೂ ಅವಳ ಮನಸ್ಸಿನಲ್ಲಿ ಎಳ್ಳಷ್ಟಾದರೂ ಆನಂದವಿರಲಿಲ್ಲ. ಈಗ ಸತಿ ಬಂದಳೆಂಬ ಸುದ್ದಿ ಅವಳ ಕಿವಿಗೆ ಮುಟ್ಟಿದ ಕೂಡಲೆ ತಟ್ಟನೆ ಎದ್ದು ಕುಳಿತು ಮಗೂ ಎಂದು ಕೈನೀಡುವಷ್ಟರಲ್ಲಿ ಸತಿಯು ಅವಳ ತೊಡೆಯ ಮೇಲೆ ಹೋಗಿ ಕುಳಿತಳು. ತಾಯಿಯು ಪರಮಾನಂದದಿಂದ:- "ಬಾರಮ್ಮಾ ! ನಿನಗೆ ಆಮಂತ್ರಣವನ್ನು ಕಳುಹಿದ್ದಿಲ್ಲ. ಅದಕ್ಕಾಗಿ ಚಿಂತಿಸಬೇಡ. **ಅವರಿಗೆ** ಪರಿಪರಿಯಿಂದ ಹೇಳಿಕೊಂಡೆನು. ಆದರೂ ಕೇಳಲಿಲ್ಲ. ನೀನಾಗಿಯೇ ಬಂದುದು ಬಹಳ ಒಳ್ಳೆಯದಾಯಿತು." ಎನ್ನುತ್ತ ಪ್ರೇಮಭರದಿಂದ ಮಗಳನ್ನು ಅಡಿಗಡಿಗೆ ಮುದ್ದಿಟ್ಟುಕೊಂಡಳು. ಮಗಳ ವಸ್ತ್ರಾಲಂಕಾರಗಳನ್ನು ನೋಡಿಅವಳಿಗೆ ತುಂಬ ಆನಂದವಾಯಿತು.

**ಸತಿ:**—"ಅಮ್ಮಾ ! ನನಗೆ ಆಮಂತ್ರಣವೇಕೆಬೇಕು ? ತಾಯಿಯನ್ನು ಕಾಣಲು ಬರುವ ಮಗಳಿಗೆ ಆಮಂತ್ರಣವೇಕೆ ? ಅಮ್ಮಾ ! ಇನ್ನೊಂದು ವಿಚಾರವಿದೆ. ಅಪ್ಪನು **ಅವರ** ಹಗೆತೀರಿಸಿಕೊಳ್ಳಬೇಕೆಂದು ಇರುವನಂತೆ ! ಒಮ್ಮೆ ಆತನನ್ನು ಕಂಡು ಮಾತಾಡಬೇಕು. ಯಜ್ಞಶಾಲೆಗೆ ಹೋಗುವೆನು."

**ತಾಯಿ:** — "ಮಗೂ, ಕೈಲಾಸಗಿರಿಯಿಂದ ದಣಿದು ಬಂದಿರುವೆ. ಸ್ವಲ್ಪ ಫಲಾಹಾರವನ್ನು ತೆಗೆದುಕೋ. ಆ ಮೇಲೆ ನೋಡುವ." ಎಂದಳು.

ದಾಕ್ಷಾಯಿಣಿಯು ತನ್ನ ತಾಯಿ ಕೊಟ್ಟ ಫಲಾಹಾರವನ್ನು ಸ್ವೀಕರಿಸಿ, "ಅಪ್ಪನನ್ನು ನೋಡಿ ಬರುವೆನು, ಅಮ್ಮಾ!" ಎಂದು ಯಜ್ಞಮಂಟಪಕ್ಕೆ ಹೊರಟಳು. ಅರಮನೆಯ ಇದಿರಿಗೆ ಸೀಲಘಾರೆಯ ದಂಡೆಯುದ್ದಕ್ಕೂ ವಿಶಾಲವಾದ ಯಜ್ಞಮಂಟಪವನ್ನು ರಚಿಸಿದ್ದರು. ದೇಶದೇಶಗಳಿಂದ ಬಂದ ಶ್ರೋತ್ರಿಯರು ಅಲ್ಲಿ ನೆರೆದಿದ್ದರು. ಸರ್ವ ಕಾರ್ಯಗಳಲ್ಲಿಯೂ ದಕ್ಷನಾದ ದಕ್ಷರಾಜನ ಐಶ್ವರ್ಯಕ್ಕೇನು ಕೊರತೆ? ಯಾವ ವ್ಯವಸ್ಥೆಯಲ್ಲಿಯೂ ನ್ಯೂನತೆಯಿರಲಿಲ್ಲ. ಮಂಟಪದ ಪೂರ್ವದ ಸಿಟ್ಟಿನಲ್ಲಿ ಯಜ್ಞವೇದಿಕೆಯನ್ನು ನಿರ್ಮಿಸಿದ್ದರು. ಋತ್ವಿಜರು ಆ ವೇದಿಕೆಯ ಸುತ್ತಲೂ ಮಂಡಲಾಕಾರವಾಗಿ ಕುಳಿತಿದ್ದರು. ಮಧ್ಯದಲ್ಲಿ ದಕ್ಷ ಮಹಾರಾಜನು ಕುಳಿತಿದ್ದನು. ಪವಿತ್ರವಾದ ಹೋಮ ಧೂಮವು ಸುತ್ತಲೂ ಪಸರಿಸಿದ್ದಿತು. ಎಡೆಬಿಡದೆ ಬೀಳುವ ಆಹುತಿಗಳಿಂದ ಅಗ್ನಿನಾರಾಯಣನು ಪ್ರಜ್ವಲಿಸುತ್ತಿದ್ದನು. ಅಗ್ನಿಯ ಜಳದಿಂದ ದಕ್ಷನ ಮುಖವು ಕೆಂಪಡರಿದ್ದಿತು. ಸತಿ ಬರುವುದನ್ನು ಕಂಡು ಎಲ್ಲರೂ ಎದ್ದುನಿಂತು ಆಕೆಗೆ ದಾರಿಯನ್ನು ಬಿಟ್ಟರು. ಸತಿಯು ಸವರಿಸಿಕೊಳ್ಳುತ್ತ ತಂದೆಯ ಬಳಿಗೆ ಬಂದು ನಮಸ್ಕಾರಮಾಡಿದಳು. ಒಂದು ಕ್ಷಣ ಋತ್ವಿಜರೆಲ್ಲರೂ ತಮ್ಮತಮ್ಮ ಕೆಲಸಗಳನ್ನು ನಿಲ್ಲಿಸಿದರು. ಆಗ ದಕ್ಷನು ಕಣ್ಣೊರಸಿಕೊಳ್ಳುತ್ತ ನೋಡುವಷ್ಟರಲ್ಲಿ ಇದಿರಿಗೆ ಸತಿ ನಿಂತಿದ್ದಳು. ಅವಳ ರತ್ನಾಲಂಕಾರಭೂಷಿತವಾದ ರಾಣಿಯ ವೇಷವನ್ನು ನೋಡಿ ದಕ್ಷನಿಗೆ ಸಮಾಧಾನವಾಯಿತು. ಅವನು ಇದೀಗ ದಕ್ಷನ ಮಗಳಾದ ದಾಕ್ಷಾಯಿಣಿಗೆ ಒಪ್ಪುವ ವೇಷ ಎಂದು ಭಾವಿಸಿ "ಮಗೂ, ಇಲ್ಲಿಗೇತಕ್ಕೆ ಬಂದುಬಿಟ್ಟೆ?" ಎಂದನು.

ದಕ್ಷನು "ಇಲ್ಲಿಗೆ" ಎಂಬ ಮಾತಿಗೆ "ಯಜ್ಞಮಂಟಪಕ್ಕೆ" ಎಂದು ಅರ್ಥಮಾಡಿಕೊಂಡಿದ್ದನು. ದಾಕ್ಷಾಯಿಣಿಯು "ದಕ್ಷಪುರಿಗೆ" ಎಂದು ಅರ್ಥಮಾಡಿಕೊಂಡು ಅಸಮಾಧಾನವನ್ನು ತಾಳಿ, "ಅಪ್ಪಾ! ಶಿವಹೀನಯಜ್ಞವು ಎಂದಾದರೂ ಮಂಗಳಕರವಾಗಬಹುದೇ!" ಎಂದಳು. ಶಿವನ ಹೆಸರನ್ನು ಕೇಳಿದೊಡನೆಯೇ ದಕ್ಷನ ಮುಖದಿಂದ ಅಗ್ನಿ ಹೊರಸೂಸಿತು. ಅವನು ಮನಸ್ಸಿನಲ್ಲಿ "ಇವಳು ಕೇವಲ ತನಗಾಗಿಯೇ ಬಂದವಳಲ್ಲ. ಮನೆಯ ಮಗಳು, ಬಂದು ಹೋದರೂ ಹೋಗಲಿ, ಯಜ್ಞವನ್ನು ನೋಡಿ ಹೋಗಲು ಬಂದಿರಬಹುದು. ನಮಗೂ ಅಡ್ಡಿಯಿಲ್ಲ. ಅವಳು ಹೋಗಿ

ಆ ತಿರುಕನ ಮುಂದೆ ಯಜ್ಞಸಮಾರಂಭವನ್ನು ವರ್ಣಿಸಿದರೆ ಅವನ ಹೊಟ್ಟೆಯಲ್ಲಿ ಉರಿ ಬಿದ್ದರೂ ಬೀಳಬಹುದು. ಎಂದು ಆಲೋಚಿಸಿದ್ದೆನು. ಆದರೆ ಆ ನೀಚನು ಹೆಂಡತಿಯನ್ನು ಸಂಧಾನಕ್ಕೆ ಕಳುಹಿರುವನು. ಇವಳು ಆ ಜೋಗಿಯ ಮಾತಿನಮೇಲೆ ಸಂಧಾನವನ್ನು ಸಾಧಿಸಲು ಬಂದಿರುವಳು. ದಕ್ಷನು ಒಮ್ಮೆ ಮಾಡಿದ ಆಲೋಚನೆಯನ್ನು ಹಿಂದಿರುಗಿಸುವನೇ '' ಎಂದು ಅಹಂಕಾರ ಅವಿಚಾರಗಳಿಂದ ಆಲೋಚಿಸಿ ಸತಿಗೆ;—'' ನಿನ್ನನ್ನು ಯಾರು ಕರೆಯಿಸಿದರು ? ಆ ತಿರುಕನೊಡನೆ ಲಗ್ನವಾದ ದಿನವೇ ನಿನ್ನನ್ನು ನಮ್ಮ ಕುಲಕ್ಕೆ ಹೊರಗಿನವಳೆಂದು ತಿಳಿದಿರುವೆನು. ನೀನು ಬರಬಾರದೆಂದೇ ಕರೆಯಕಳುಹಲಿಲ್ಲ.'' ಎಂದು ಮರ್ಮವನ್ನು ಭೇದಿಸಿ ಮಾತಾಡಿದನು.

ಸತಿಯು ಹುಟ್ಟಿದಂದಿನಿಂದಲೂ ಇಂತಹ ಬಿರುನುಡಿಗಳನ್ನು ಕೇಳಿದವಳಲ್ಲ. ಆಕೆಯ ಕಣ್ಣುಗಳಲ್ಲಿ ತಟ್ಟನೆ ನೀರು ಬಂದಿತು. '' ಅಪ್ಪಾ, ಏಕೆ ಸುಮ್ಮನೆ ಬಿರುನುಡಿಯನ್ನಾಡುವೆ ! '' ಎಂದಳು. ಸತಿಯ ಸಮಾಧಾನದ ಈ ಕರುಣಸ್ವರವನ್ನು ಕೇಳಿ ಎಲ್ಲರ ಹೃದಯವೂ ಕರಗಿತು; ಆದರೆ ದುರಹಂಕಾರಿಯೂ ಅವಿಚಾರಿಯೂ ಆದ ದಕ್ಷನು ಮಾತ್ರ ಮೊದಲಿನಂತೆ ಕಠೋರಸ್ವರದಿಂದ '' ನಾಚಿಕೆಗೇಡಿ! ನೀನು ನನ್ನನ್ನು ಅಪ್ಪಾ ಎನ್ನಬಾರದು. ಅಭಿಮಾನಿಯಾದ ದಕ್ಷನ ಮಗಳಾಗಿದ್ದರೆ ನೀನು ಈ ರೀತಿ ಕರೆಯದೆ ಶ್ರಾದ್ಧದ ಮನೆಗೆ ಬರುವ ಬೆಕ್ಕಿನಂತೆ ನಾಚಿಕೆಯನ್ನು ಬಿಟ್ಟು ಬರುತ್ತಿರಲಿಲ್ಲ. ನೀನು ಆ ತಿರುಕನ ಹೆಂಡತಿ; ಆ ಮಸಣದ ಪಿಶಾಚಿಗಳೊಡನೆ ಒಡನಾಡಿದವಳು. ಆದುದರಿಂದಲೇ ಹೀಗೆ ಮಾನಮರ್ಯಾದೆಗಳನ್ನು ತೊರೆದು ಬಂದಿರುವೆ. ಈ ನಡತೆಯು ದಕ್ಷಪುತ್ರಿ ದಾಕ್ಷಾಯಿಣಿಗೆ ಒಪ್ಪತಕ್ಕುದಲ್ಲ. ಆ ನಿರ್ಲಜ್ಜನಾದ ತಿರುಕನ ಸತಿಗೇ ಒಪ್ಪುವಂಥದು '' ಎಂದನು.

**ಸತಿ:**— ಅಪ್ಪಾ, ಕಾರಣವಿಲ್ಲದೆ ಅವರನ್ನು ' ನಿರ್ಲಜ್ಜ ' ಎನ್ನುವೆಯೇಕೆ ? ಬಯ್ಯಬೇಡ.

**ದಕ್ಷ:**— ನಿರ್ಲಜ್ಜನೆಂದರೆ ಅವನಿಗೆ ಬಯ್ದಂತಾಗುವುದಿಲ್ಲ. ಇದಕ್ಕೂ ಕೀಳುಮಾತುಗಳು ಬೇಕು. ದಿಗಂಬರನಾದವನಿಗೆ ಲಜ್ಜೆಯೆಲ್ಲಿಯದು? ಮನೆಯೇನು ಮಸಣವೇನು ? ಗಂಧವೇನು ಬೂದಿಯೇನು ? ಅಮೃತವೇನು

ವಿಷವೇನು ? ಇಂಥವನಿಗೆ ನಿರ್ಲಜ್ಜನೆನ್ನಬೇಕೋ, ಉನ್ಮತ್ತನೆನ್ನಬೇಕೋ, ಛೀ. ಮೋರೆಯ ತೋರಬೇಡ. ನಡೆ.

**ಸತಿ:**— ' ನಿರ್ಲಜ್ಜರಾಗಿರಲಿ, ಉನ್ಮತ್ತರಾಗಿರಲಿ, ಅವರೇ ನನ್ನ ಜೀವಸಸರ್ವಸ್ವ. ನಿನ್ನ ಬಾಯಿಯಿಂದ ನಾನು ಅವರ ನಿಂದೆಯನ್ನು ಕೇಳ ಬೇಕಾಯಿತಲ್ಲವೇ ? " ಸಿಟ್ಟಿನ ಭರದಿಂದ ದಾಕ್ಷಾಯಿಣಿಯ ಶರೀರವೆಲ್ಲಾ ಗಡಗಡ ನಡುಗುತ್ತಿದ್ದಿತು. ಬಾಯಿಯಿಂದ ಮಾತು ಹೊರಡದು. ನೆರೆದವ ರೆಲ್ಲರೂ ತಟಸ್ಥರಾಗಿ ಕುಳಿತಿದ್ದರು. ಮುಂದಾಗುವ ಅಶುಭ ಪರಿಣಾಮ ವನ್ನು ನೆನೆನೆನೆದು ಅವರೆಲ್ಲರೂ ಮನಸ್ಸಿನಲ್ಲಿ ಮರಮರನೆ ಮರುಗುತ್ತಿದ್ದರು. " ಅಪ್ಪಾ, ಪ್ರಸನ್ನನಾಗು. ಕ್ಷಮಿಸು. ನಮ್ಮದೇನಾದರೂ ಅಪರಾಧವಾಗಿ ದ್ದರೆ ಅದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಹೇಳಕೂಡದೆ ? " ಎಂದಳು.

ವಿನಾಶಕಾಲಕ್ಕೆ ವಿಪರೀತಬುದ್ಧಿ. ದಕ್ಷನಿಗೆ ವಿನಾಶಕಾಲವೊದಗಿದೆ ಯೆಂದು ಮೊದಲೊಮ್ಮೆ ಹೇಳಿರುವೆವು. ಸತಿಯ ಈ ಮಾತುಗಳಿಂದ ದಕ್ಷನು ಸಮಾಧಾನಹೊಂದಬೇಕಾಗಿದ್ದಿತು. ಆದರೆ ಆತನ ಅಭಿಮಾನವು ಇನ್ನಷ್ಟು ಉತ್ತೇಜಿತವಾಯಿತು. ಶಿವನು ಸಂಧಾನಕ್ಕಾಗಿ ಇವಳನ್ನು ಕಳುಹಿರು ವುದೇ ನಿಜವೆಂದು ಅವನು ಭಾವಿಸಿಕೊಂಡನು. ಇಲ್ಲವಾದರೆ ಅಭಿಮಾನಿ ಯಾದ ದಕ್ಷಪುತ್ರಿಯು ಈ ರೀತಿ ಕ್ಷಮೆಯನ್ನು ಬೇಡುವಳೇ, ಎಂದು ಅವನು ತಿಳಿದುಕೊಂಡನು. ಆಗಲವನು ದುರಹಂಕಾರದಿಂದ-" ಪ್ರಾಯ ಶ್ಚಿತ್ತವೇನು ? ಅದಕ್ಕೆ ದೇಹಾಂತಪ್ರಾಯಶ್ಚಿತ್ತವೇ ಸರಿಯಾದುದು. ನೀನು ಎಂದು ಈ ದೇಹವನ್ನು ಬಿಡುವೆಯೋ ಅಂದೇ ಆ ಅಧಮನ ಸಂಬಂಧವು ತಪ್ಪಿಹೋಗುವುದು. ಆ ದುರಾಚಾರಿಯ ಸಂಬಂಧವು ಕಡಿದ ಹೊರತು ನನ್ನ ಸಿಟ್ಟು ಇಳಿಯದು. " ಎಂದನು.

ಇನ್ನು ಸತಿಯಿಂದ ಪತಿನಿಂದೆಯನ್ನು ಸಹಿಸುವುದಾಗಲಿಲ್ಲ. ಆಕೆ ಪತಿನಿಂದೆಯನ್ನು ಕೇಳಿದ ಅಪವಿತ್ರವಾದ ತನ್ನ ಕಿವಿಗಳಲ್ಲಿ ಬೆರಳಿಟ್ಟುಕೊಂಡು ಶಿವ ! ಶಿವ ! ಎನ್ನುತ್ತ ದೊಪ್ಪನೆ ನೆಲದ ಮೇಲೆ ಕುಳಿತು ಯೋಗಾಸನ ವನ್ನು ಹಾಕಿ ಕಣ್ಮುಚ್ಚಿದಳು. ಕೆಲವುಕಾಲ ಅವಳ ಶರೀರವು ಸ್ತಬ್ಧವಾಗಿ ದ್ದಿತು. ನೆರೆದವರೆಲ್ಲ ಚಕಿತರಾಗಿ ಚಿತ್ರದ ಬೊಂಬೆಗಳಂತೆ ನೋಡುತ್ತ ನಿಂತಿ ದ್ದರು. ನೋಡನೋಡುತ್ತ ಸತಿಯ ದೇಹದಿಂದ ಅಪೂರ್ವವಾದೊಂದು ದಿವ್ಯ

ತೇಜಸ್ಸು ಹೊರಸೂಸಿ ಅದರ ತೇಜದಿಂದ ಯಜ್ಞಾಗ್ನಿಯ ತೇಜವೂ ಮಲಿನವಾಯಿತು. ಆ ಜ್ಯೋತಿಯು ಯಜ್ಞಕುಂಡದ ಅಗ್ನಿಯೊಡನೆ ಆಕಾಶದಲ್ಲಿ ಅಡಗಿಹೋಯಿತು. ಪರಕ್ಷಣದಲ್ಲಿಯೆ ಸತಿಯ ದೇಹವು ಮಣ್ಣಿಬೊಂಬೆಯಂತೆ ನೆಲಕ್ಕೆ ಉರುಳಿತು.

ಉತ್ತರಕ್ಷಣದಲ್ಲಿಯೇ ಸತಿಯ ಸಂಗಡ ದಕ್ಷಪುರಿಗೆ ಬಂದಿದ್ದ ನಂದಿಯು ಈ ಎಲ್ಲ ವಾರ್ತೆಯನ್ನು ಕೈಲಾಸಪತಿಯ ಬಳಿಗೆ ಹೋಗಿ ಅರಿಕೆ ಮಾಡಿದನು. ಕೂಡಲೆ ಕೈಲಾಸಪತಿಯೂ ಆತನ ಗಣದವರೂ ಓಡುತ್ತ ದಕ್ಷಪುರಿಗೆ ಬಂದರು. ಮಹಾ ವೈಭವಯುಕ್ತವಾದ ದಕ್ಷರಾಜನ ಯಜ್ಞಶಾಲೆಯು ಕ್ಷಣದಲ್ಲಿ ಮಸಣದಂತಾಗಿ ಹೋಯಿತು. ಭೂತಗಣವು ದಕ್ಷರಾಜನನ್ನೂ ಆತನ ಪರಿವಾರವನ್ನೂ ಕಡಿದು ಹಾಕಿತು. ಶಂಕರನು ಸತಿಯ ಮೃತದೇಹವನ್ನು ಎತ್ತಿಕೊಂಡು ತಾಂಡವ ನೃತ್ಯವನ್ನು ಆರಂಭಿಸಿದನು. ಅಷ್ಟರಲ್ಲಿ ಪತಿವ್ರತೆಯಾದ ದಕ್ಷಪತ್ನಿಯು ಬಂದು ಶಂಕರನ ಪಾದಗಳಿಗೆರಗಿ ಕ್ಷಮೆಯನ್ನು ಕೋರಿ ತನ್ನ ಸೌಭಾಗ್ಯವನ್ನು ಕಾಪಾಡಬೇಕೆಂದು ಬೇಡಿಕೊಂಡಳು. ಆಗ ಕರುಣಾಳುವಾದ ಶಂಕರನು ಅವಳ ಪ್ರಾರ್ಥನೆಯನ್ನು ಮನ್ನಿಸಿ ದಕ್ಷನು ಪುನರ್ಜೀವಿತನಾಗಲೆಂದು ಆಶೀರ್ವದಿಸಿದನು. ದಕ್ಷನು ಜೀವಿತನಾಗಬಹುದೆಂದು ನಿರ್ಣಯವಾಯಿತು. ಆದರೆ ಆತನ ರುಂಡವನ್ನು ಭೂತಗಣವು ಎಲ್ಲಿಯೋ ಎಸೆದುಬಿಟ್ಟಿದ್ದಿತು. ಎಷ್ಟು ಹುಡುಕಿದರೂ ಅದು ಸಿಕ್ಕಲಿಲ್ಲ. ನೆರೆದವರಲ್ಲೊಬ್ಬನು ಕಡೆಗೊಂದು ಉಪಾಯವನ್ನು ಆಲೋಚಿಸಿದನು. ಸಮೀಪದಲ್ಲಿದ್ದ ಬಿದ್ದಿರುವ ಒಂದು ಆಡಿನ ತಲೆಯನ್ನು ತಂದು ದಕ್ಷನ ಮುಂಡದ ಮೇಲಿಟ್ಟನು. ದಕ್ಷನು ಶಂಕರನ ಪ್ರಸಾದದಿಂದ ಪುನರ್ಜೀವಿತನಾದನು. ದಕ್ಷಪತ್ನಿಯ ಸೌಭಾಗ್ಯವು ಉಳಿಯಿತು. ಅವಳು ಪುನಃ ಸುಮಂಗಲಿಯಾದಳು. ಈಶ್ವರ ಕೃಪಾಪ್ರಸಾದವಿದ್ದರೆ, ಸರ್ವರ ಇಷ್ಟಾರ್ಥಗಳೂ ನೆರವೇರುವುದರಲ್ಲಿ ಸಂದೇಹವಿಲ್ಲ.

“ಆತ್ಮಾರಾಮ[illegible] ಹಿತಾಹಿತಸಮಃ ಸ್ಪೃಸ್ಯೋ ಹರಃ ಪಾತುವಃ”



**ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ.**

**ಪೌರಾಣಿಕ ಕಥೆಗಳು.**

| | |
|---|---|
| ಸಾವಿತ್ರೀ ಸತ್ಯವಾನ | ೦-೧೨-೦ |
| ದಾಕ್ಷಾಯಿಣಿ | ೦- ೮-೦ |
| ಪಾರ್ವತಿ | ೦- ೮-೦ |

**ಐತಿಹಾಸಿಕ ಕಥೆಗಳು.**

| | |
|---|---|
| ಪದ್ಮಿನಿ | ೦-೧೨-೦ |
| ಮಹಾರಾಣಿ ಲಕ್ಷ್ಮೀಬಾಯಿ | ೧- ೦-೦ |
| ಶ್ರೀಮಂತ ನಾನಾಸಾಹೇಬ ಪೇಶವೆ. | |

( ಅಚ್ಚಿನಲ್ಲಿದೆ )

ವ್ಯವಸ್ಥಾಪಕ
ಶ್ರೀ ಸರಸ್ವತೀ ಮಂದಿರಮ್
ಧಾರವಾಡ.

